# ಮುನ್ನುಡಿ

ಇದು ಕನ್ನಡ ಜೈನ ಗ್ರಂಥಗಳಿಂದ ಆಯ್ದುಕೊಂಡಿರುವ ಸ್ತೋತ್ರಗಳ ಸಂಗ್ರಹ. ಇವನ್ನು ಸಂಕಲಿಸಿ ಪ್ರಕಟಿಸಿರುವ ವಿದ್ಯಾಭೂಷಣ ಪಂಡಿತ ಶ್ರೀ. ಕೆ. ಭುಜಬಲಿ ಶಾಸ್ತ್ರಿಗಳು ಜೈನರದೇ ಅಲ್ಲ, ಜೈನೇತರರ ಕೃತಜ್ಞತೆಗೂ ತಮ್ಮನ್ನು ಸರಿಬರಿಯಾಗಿ ಈಡು ಮಾಡಿಕೊಂಡಿರುತ್ತಾರೆ. ಜೈನೇತರರರದೂ ಅಂದೆನಲ್ಲ? ಅದೇಕೆ ಎಂದರೆ, ಈ ಸಂಸಾರದ ಮರುಭೂಮಿಯಲ್ಲಿ ಎಲ್ಲೋ ಹುದುಗಿಕೊಂಡಿರುವ ಅದೊಂದೇ ಜಲಾಶಯವನ್ನು ಪ್ರತ್ಯೇಕ ಧರ್ಮದ ಅನುಯಾಯಿಗಳೂ ಹುಡುಕಾಡುತ್ತ ಹೆಜ್ಜೆಹಾಕುತ್ತಿರುವಾಗ ಬಾಯಾರಿದಲ್ಲಿ ಅವರಲ್ಲಿ ಅವರೊ ಇವರೊ ಯಾರಾದರೂ ತಾವು ಕೇಳಿ ಬಲ್ಲ ದಾರಿಯನ್ನು ಪರರಿಗೆ ತೋರಿಸಿದರೆ ಯಾರಿಗೆ ಒಲ್ಲದು? ಈ ಉಪಕಾರದ ಬಗ್ಗೆ ಶ್ರೀ ಶಾಸ್ತ್ರಿಯವರನ್ನು ಅಭಿನಂದಿಸುತ್ತೇನೆ.

ಜೈನಧರ್ಮದಲ್ಲಿ ಸೃಷ್ಟಿಕರ್ತನೂ ಸೃಷ್ಟಿಪಾಲಕನೂ ಆದ, ಹಾಗೂ ಇತರ ಧರ್ಮಗಳು ಪರಮಾತ್ಮನೆಂದು ಒಪ್ಪಿಕೊಳ್ಳುವ ದೇವರೆಂಬ ಏಕಮೇವಾದ್ವಿತೀಯವಾದ ವ್ಯಕ್ತಿವಿಶೇಷಕ್ಕೆ ಎಡೆ ಇಲ್ಲ, ಅವನ ಆವಶ್ಯಕತೆಯೇ ಇಲ್ಲ. ಅದರ ಕಟ್ಟಳೆಯ ಹಾಗೂ ನಂಬುಗೆಯ ಮೇರೆಗೆ ಅಂಥವನಾಗಲಿ, ಅವನ ಅವತಾರವಾಗಲಿ, ಪ್ರತಿನಿಧಿಯಾಗಲಿ, ನಿಯೋಗಿಯಾಗಲಿ ಮನುಷ್ಯ ಜೀವಿತದಲ್ಲಿ ಒಂದು ತುಂತುರನ್ನು ಎಬ್ಬಿಸಲಾರ, ಒಂದು ತುಂತುರನ್ನು ಮಾಣಿಸಲಾರ. ಅಥವಾ ಸೂಕ್ಷ್ಮವಾಗಿ ವಿಚಾರಿಸಿದರೆ, ನಿರ್ವೃತನಾದ ಜೀವಾತ್ಮನೇ ಜೈನಧರ್ಮದ ದೇವರೆನ್ನಬಹುದು.

**ಕೇವಲದಂಸಣು ಣಾಣು ಸುಹು ವೀರಿಉ ಜೋ ಜಿ ಅಣಂತು ।**
**ಸೋ ಜಿಣದೇಉ ವಿ ಪರಮಮುಣಿ ಪರಮಪಯಾಸು ಮುಣಂತು ॥ ೩೩೦ ॥**
**(ಯೋಗೀಂದ್ರಾಚಾರ್ಯನ ಪರಮಾತ್ಮಪ್ರಕಾಶ)**

ಅಂದರೆ ಯಾವ ಜೀವನು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಸುಖವೂ, ಅನಂತವಾದ ಶಕ್ತಿಯೂ ಪರಮಪ್ರಕಾಶವೂ ಉಳ್ಳವನಾಗಿ ಪರಮಮುನೀಶ್ವರನೂ ಆಗಿರುವನೊ, ಆತನು ಜಿನದೇವನು. ಈ ರೀತಿ ಜೈನಧರ್ಮವು ತನ್ನದೇ ಆದ ವಿವಿಕ್ತವಾದ ಮರ್ಯಾದೆಯಲ್ಲಿ ದೇವತ್ವವನ್ನು ಒಪ್ಪಿಕೊಳ್ಳುತ್ತದೆ, ಹಾಗೂ ತನ್ನ ಧೋರಣೆಯ ಮೇರೆಗೆ, ದೇವೀಭೂತರಾದ

ಅಸಂಖ್ಯೇಯರಿಗೆ ತನ್ನಲ್ಲಿ ಇಂಬನ್ನೂ ಮಾಡಿಕೊಳ್ಳುತ್ತದೆ. ಅಂಥವರಲ್ಲಿ ಹೆಸರುಗಳನ್ನು ಬಲ್ಲಷ್ಟರ ಮಟ್ಟಿಗೆ ಮಹಿಷ್ಠರಾದವರೆಂದರೆ, ಈಗ ನಡೆಯು ತ್ತಿರುವ ಅವಸರ್ಪಿಣೀ ಯುಗದ ಮೊತ್ತಮೊದಲನೆಯ ನಾಲ್ಕು ಕಾಲ ಗಳಲ್ಲಿ ಆಗಿ ಹೋದ ತೀರ್ಥಂಕರರೂ ತೀರ್ಥಕರರೂ ಎಂಬ ೨೪ ಮಂದಿ ಜಿನರು ಅಥವಾ ಅರ್ಹಂತರು. ಆದರೆ ಅವರೆಲ್ಲರೂ ಯಾವ ಸಂಗವೂ ಇಲ್ಲದ ನಿಃಸಂಗರು, ಯಾವ ರಾಗವೂ ಇಲ್ಲದ ವೀತರಾಗರು. ಅವರಲ್ಲಿ ಹಲವರನ್ನು ಈ ಸ್ತೋತ್ರಗಳಲ್ಲಿ ಕೊಂಡಾಡಿದೆ.

ಈ ಸ್ತೋತ್ರಗಳನ್ನು ಓದುವಲ್ಲಿ ಆಯಾ ಕವಿಯ ಹೃದಯದಿಂದ ಧಾರಾಳವಾಗಿ ಉಕ್ಕಿಬರುವ ಭಕ್ತಿಸ್ತೋತ್ರದಲ್ಲಿ ನಮ್ಮ ಹೃದಯಗಳು ಸಹಸಾ ತೇಲಿ ಹೋಗುವುದನ್ನು ಅನುಭವಿಸುತ್ತೇವೆ. ಭಕ್ತಿ ಎಂದೆವಲ್ಲ? ಆದರೆ ಯಾವ ತೀರ್ಥಂಕರರಿಗೆ ಈ ಸ್ತೋತ್ರಗಳನ್ನು ಮಾಡಿದೆಯೊ, ಯಾವ ತೀರ್ಥಂಕರರಲ್ಲಿ ತಮತಮಗೆ ಬೇಕಾದುದನ್ನು ಇವಲ್ಲಿ ಬೇಡಿದೆಯೊ, ಅವರು ನಿಃಸಂಗರು, ವೀತರಾಗರು, ಅತಏವ ಅವರಾರೂ ಮನುಷ್ಯನ ಜೀವಿತದಲ್ಲಿ ಒಂದು ಕಡ್ಡಿಯನ್ನು ಆಚೀಚೆಗೆ ನೂಕರು, ಆತನ ಸುಖ ದುಃಖಗಳನ್ನು ಕಡೆಗಣ್ಣಿನಿಂದ ನೋಡರು, ಆತನ ಯಾಚನೆಗಳ ಗೋಪಾಲ ಬುಟ್ಟಿಯಲ್ಲಿ ಬೈಕವನ್ನು ಹಾಕರು, ಈ ಕಾರಣ ಪ್ರತ್ಯೇಕ ಜೀವನೇ ತಂತನ್ನ ಎಲ್ಲಾ ಕರ್ಮಕ್ಕೂ ಅವುಗಳ ಫಲೋಪಭೋಗಕ್ಕೂ ತಾನೇ ಹೊಣೆ ಎಂದ ಮೇಲೆ ಅಂಥವರು ಹೇಗೆ ತಾನೆ ನಮ್ಮ ಭಕ್ತಿಭಾಜನವಾಗಲಾಪರು? ಎಂದು ಕೇಳಿದರೆ, ಜೈನಧರ್ಮದಲ್ಲಿ ನಿರ್ವೃತನಾದ ಜೀವಾತ್ಮನನ್ನು ದೇವ ರೆಂದು ಅಥವಾ ದೇವತಾಕಲ್ಪನೆಂದು ಭಾವಿಸುವುದರಿಂದ, ಅನೇಕಾನೇಕ ಜನ್ಮಜನ್ಮಾಂತರಗಳನ್ನು ತೇರಿ ಕೊನೆಗೆ ಅತ್ಯೋಪ್ಯತಿಶಯವಾದ ಬೇರೊಂ ದಿಲ್ಲದ ನಿರ್ವಾಣಪದವಿಯನ್ನು ಅಯ್ದಿ, 'ನಿನಗೆ ನೀನೆ ದೊರೆ' ಎನಿಸಿ ಕೊಂಬ ಆ ತೀರ್ಥಂಕರರೇ ಅದರ ದೇವತಾಕಲ್ಪರು; ಆದರೆ ಅವರು ಹಲವರಿದ್ದಾರಲ್ಲ? ಅಹುದು, ಹಲವರಿದ್ದಾರೆ, ಸನಾತನಧರ್ಮದಲ್ಲಿ ಅವತಾರಗಳು ಹಲವಿಲ್ಲವೇ? ಅವರೆಲ್ಲರನ್ನು ದೇವರೆಂದು ಭಾವಿಸು ವುದಿಲ್ಲವೇ? ಅತಏವ ಆ ತೀರ್ಥಂಕರರು ನಮ್ಮ ಮೊರೆಗಳನ್ನು ಲಾಲಿ ಸಲಿ, ಆಲಿಸದಿರಲಿ, ನಾವಾದರೆ ಅವರನ್ನು ಆರಾಧಿಸಲಿಕ್ಕೆ, ನಮ್ಮ ವಾಂಛೆ ಗಳನ್ನು ಅವರಲ್ಲಿ ಬೇಡಲಿಕ್ಕೆ ಅಡ್ಡಿಯುಂಟೇ? ಏಕೆಂದರೆ ನಮ್ಮನ್ನು 'ಕಾವವರಾರು ನೀನಿರೆ ಪೆರರ್' ಅಲ್ಲವೇ ಅವರು? ಈ ಮೋರೆಗೆ ವ್ಯಾವ

ಹಾರಿಕವೇ ಆಗಿಯಾದರೂ ಜೈನರಲ್ಲಿ, ಜೈನ ಸಾಹಿತ್ಯದಲ್ಲಿ ಭಕ್ತಿಗೆ ಬೇಕಾದಷ್ಟು ಅವಕಾಶವೂ ಇದೆ, ಆ ತಕ್ಕ ಲಕ್ಷ್ಯವೂ ಇದೆ ಎನ್ನಬಹುದು.

ಇನ್ನು ಈ ಸ್ತೋತ್ರಗಳಲ್ಲಿಯ ಕೆಲವು ಅಗುಳನ್ನು ಸವಿದು ನೋಡೋಣ. ಧ್ಯಾನದಲ್ಲಿ (ಪುಟ ೩).

ಬಗೆ ಶುದ್ಧಂ ತನು ಶುದ್ಧವಾ ಸ್ತುತಿಪದಾರ್ಥಂ ಶುದ್ಧವಿಂತೀ ತ್ರಿಶು
ದ್ಧಿಗಳಿಂ ಧ್ಯಾನಿಸುವೆ.................................... । ೫ ।

ತನ್ನ ಮನಸ್ಸು ಶುದ್ಧ, ತನ್ನ ದೇಹ ಶುದ್ಧ, ತಾನು ಮಾಡುವ ಸ್ತುತಿ ಶುದ್ಧವಾದ ತ್ರಿಶುದ್ಧಿ ಇರಬೇಕು;

ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿವಾ ದುಃಪಾಪ ದುರ್ಮಾರ್ಗಮಂ ।
(ಪು. 4, ಪದ್ಯ ೪)

ಅಂದರೆ ಧರ್ಮದ ಮಾರ್ಗದಲ್ಲಿ ನಡೆಯಿರಿ, ಪಾಪಾತ್ಮಕವಾದ ಆ ಕೆಟ್ಟ ಹಾದಿಯನ್ನು ಬಿಟ್ಟು ಬಿಡಿರಿ;

ಗುಣಾಗುಣ ವಿವೇಕಮೂಕರತಿ ಮೂರ್ಖರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆವರಾದಿ ತೀರ್ಥೇಶ್ವರಾ ॥
(ಪು. 16, ಪ. ೧೭)

ಅಂದರೆ ಆದಿನಾಥಾ (ಉತ್ತಮರಾದವರು ಬೇರೆಷ್ಟೋ ವಿಧಗಳಿಂದ ಪುಣ್ಯ ಭಾಗಿಗಳಾಗುತ್ತಾರೆ, ಆದರೆ) ಗುಣಾವಗುಣಗಳ ವಿವೇಚನೆಗೆ ಬಾಯಿ ಇಲ್ಲದ ಅತಿ ಮೂರ್ಖರಾದ ನಮ್ಮಂಥವರಾದರೊ ನಿನ್ನನ್ನು ನಮಸ್ಕರಿಸುವುದರಿಂದಲೇ ಪುಣ್ಯವನ್ನು ಪಡೆಯುತ್ತಾರೆ;

ಕಾವವರಾರು ನೀನಿರೆ ಪೆರರ್? ॥ (ಪು. 23, ಪ. ೨) ॥

ಅಂದರೆ ದೇವಾ, ನೀನಿರುವಾಗ ನಮ್ಮನ್ನು ಕಾಪಾಡಲಿಕ್ಕೆ ಬೇರೆ ಯಾರು ಬೇಕು?

....................................ನಿಶ್ಚಯಾಪೇಕ್ಷೆಯಿಂ ।
ಗುರುವಕ್ಕುಂ ಬಗೆವಂದು ತಾನೆ ತನಗೆ......॥ (ಪು. 26, ಪ. ೬)

ಅಂದರೆ ನಿಶ್ಚಯವಾದ ಅಪೇಕ್ಷೆಯಿಂದ ಬಗೆಯುವಲ್ಲಿ ಬೇರೆ ಗುರು ಬೇಡ, ತನಗೆ ತಾನೇ ಗುರು— ಇದು ಭಕ್ತಿಯ ಲಕ್ಷಣ, ಏಕೆಂದರೆ ಭಕ್ತಿಮಾರ್ಗದಲ್ಲಿ ಗುರುವಿನ ಆವಶ್ಯಕತೆ ಇಲ್ಲ, ಭಕ್ತನು ತಾನೇ ತನ್ನ ಗುರುವಾಗುತ್ತಾನೆ;

ಕಾವರಿಲ್ಲದೆ ಬೆಂದು ಸೀಹರಿವೋದೆನಿನ್ನೆಘಮ್ಮೆರಿಯುಂ
ದೇವ ನೀಂ ಪೆರಗಿಕ್ಕಿ ರಕ್ಷಿಸವೋಘಮೊನ್ನನಘಾಂತಕಾ ॥ (ಪು. 35, ಪ. ೨)

ಅಂದರೆ ಪಾಪಸಂಹಾರಕನಾದ ದೇವಾ, ನನ್ನನ್ನು ಕಾಪಾಡುವವರಿಲ್ಲದೆ ಬೆಂದು ಸೀದು ಹೋದೆ, ಇನ್ನಾದರೂ ಪಾಪವೆಂಬ ಆ ವೈರಿಯನ್ನು ಹಿಂದಕ್ಕೆ ತಳ್ಳಿ ನನ್ನನ್ನು ರಕ್ಷಿಸು;

ಮೀರಿ ಮೀರಿ ದುರಂತ ದುಃಖಮನುಂಡುಮುಂಡು ಭವತ್ಪದ
ಕ್ಕಾರೆನಾನಮೋಘಮಾ ಪರಿರಕ್ಷಿಸೆನ್ನನಘಾಂತಕಾ ॥ (ಪು. 30, ಪ. ೭) ॥

ಅಂದರೆ ಪಾಪಾಪಹಾರಿಯಾದ ದೇವಾ, ಕೊನೆಯಿಲ್ಲದ ದುಃಖಗಳನ್ನು ಮಿಗಿಮಿಗಿಲಾಗಿ ಅನುಭವಿಸಿ, ನಿನ್ನಡಿಗಳನ್ನು ಸೇರಲಿಕ್ಕೆ ನಾನು ಸುತರಾಂ ಅಲ್ಲದವನಾದೆ, ಇನ್ನಾದರೂ ಕಾಪಾಡು — ಇದು ಭಕ್ತಿಯ ಪರಾಕಾಷ್ಠೆಯಾದ ಪ್ರಪತ್ತಿಯ ಭಿಕ್ಷೆ, ಇವು ಭಕ್ತಿಯ ಉದ್ಗಾರಗಳಲ್ಲವಾದರೆ ಬೇರೆ ಏತರವಂತೆ?

ಈ ಸ್ತೋತ್ರಗಳನ್ನು ಧರ್ಮದಲ್ಲಿ ಶ್ರದ್ಧೆಯುಳ್ಳ ಎಲ್ಲರೂ ಓದಬೇಕು, ಮುಖ್ಯವಾಗಿ ಜೈನರು ಓದಲೇ ಬೇಕು, ದಿನಾಗಲೂ ಓದಬೇಕು. ಇವನ್ನು ಸಂಗ್ರಹಿಸುವ ಪರಿಶ್ರಮವನ್ನು ವಹಿಸಿಕೊಂಡ ಬಗ್ಗೆ ಶ್ರೀ ಶಾಸ್ತ್ರಿಯವರನ್ನು ಪುನಶ್ಚ ಅಭಿನಂದಿಸುತ್ತೇನೆ. ಹಾಗೂ ಈ ಸಂಗ್ರಹದಲ್ಲಿ ರತ್ನಾಕರ ವರ್ಣಿಯ ರತ್ನಾಕರಾಧೀಶ್ವರಶತಕ, ಅಪರಾಜಿತೇಶ್ವರಶತಕಗಳಲ್ಲಿರುವ ಅವೆಷ್ಟೋ ಸೊಗಸಾದ ಪದ್ಯಗಳಿಂದ ಆಯ್ದುಕೊಂಡಿಲ್ಲದಿರುವುದು ಒಂದು ಕೊರತೆಯೇ ಸರಿ ಎಂದು ಬೆರಳೂರಿ ಸೂಚಿಸಿ, ಅದನ್ನು ಇದರ ಮುಂದಣ ಮುದ್ರಣದಲ್ಲೊ ಇಲ್ಲವೆ ಮತ್ತಿನ ಭಾಗದಲ್ಲೊ ನೇರ್ಪಡಿಸಲಾದೀತೆಂದು ಕೋರುತ್ತೇನೆ.

ಕೊನೆಯದಾಗಿ, ಜಿನೇಂದ್ರರನ್ನು ಕುರಿತು ಜೈನ ಮಾನತುಂಗಾಚಾರ್ಯನು ರಚಿಸಿದ ಭಕ್ತಾಮರಸ್ತೋತ್ರದಿಂದ ಸರ್ವಧರ್ಮಗಳಿಗೆ ಸಮ್ಮತವೂ ಉಪಾದೇಯವೂ ಆದ ಇದೊಂದು ವೃತ್ತವನ್ನು ಉದ್ಧರಿಸಿ —

ಬುದ್ಧಸ್ತ್ವಮೇವ ವಿಬುಧಾರ್ಚಿತಬುದ್ಧಿಬೋಧಾ-
ತ್ತ್ವಂ ಶಂಕರೋಽಸಿ ಭುವನತ್ರಯಶಂಕರತ್ವಾತ್ ।
ಧಾತಾಸಿ ಧೀರ ಶಿವಮಾರ್ಗವಿಧೇರ್ವಿಧಾನಾ-
ದ್ವ್ಯಕ್ತಂ ತ್ವಮೇವ ಭಗವನ್ ಪುರುಷೋತ್ತಮೋಽಸಿ ॥ ೨೫ ॥

ಕನ್ನಡ ಜೈನ ಕವಿಯಾದ ಜನ್ನನ ಅಮರವಾಣಿಯಲ್ಲಿ —

ಎನ್ನಂ ನಿನ್ನಂತೆ ಮಾಡನಂತ ಜಿನೇಂದ್ರಾ ॥ (ಪು. 31, ಪ. ೨) ॥

ಎಂದು ಸ್ವಪರಪರವಾಗಿ ಆ ಜಿನೇಂದ್ರನಲ್ಲಿ ಬೇಡಿಕೊಳ್ಳುತ್ತೇನೆ. ಇತಿ ಶಮ್.

ಗೋವಿಂದ ಪೈ.

# ಸಂಪಾದಕೀಯ ಮಾತು

ಜೈನಧರ್ಮಾನುಸಾರವಾಗಿ ಎಲ್ಲಾ ಜೀವಗಳು ದ್ರವ್ಯದೃಷ್ಟಿಯಿಂದ ಪರಸ್ಪರ ಸಮಾನವಾಗಿರುವವು. ಇವುಗಳಲ್ಲಿ ಯಾವ ಭೇದವೂ ಇಲ್ಲ; ಎಲ್ಲವುಗಳ ವಾಸ್ತವಿಕ ಸ್ವಭಾವವು ಒಂದೇ ಆಗಿದೆ.

ಪ್ರತಿಯೊಂದು ಜೀವವೂ ಸ್ವಭಾವದಿಂದಲೇ ಪೂರ್ಣಜ್ಞಾನ, ಪೂರ್ಣದರ್ಶನ, ಪೂರ್ಣಬಲ, ಪೂರ್ಣಸುಖ—ಮೊದಲಾದ ಅನಂತಶಕ್ತಿಗಳ ಪಿಂಡವು. ಆದರೆ ಅನಾದಿಕಾಲದಿಂದ ಜೀವಗಳೊಡನೆ ಕರ್ಮಮಲವು ಅಂಟಿಕೊಂಡಿದೆ. ಈ ಕರ್ಮಮಲದಿಂದಲೇ ಜೀವಗಳ ನಿಜಸ್ವಭಾವವು ಆಚ್ಛಾದಿಸಲ್ಪಟ್ಟು ಇವುಗಳ ಪೂರ್ವೋಕ್ತ ಶಕ್ತಿಗಳು ಪ್ರಕಟವಾಗದೆ ಪರತಂತ್ರಕ್ಕೊಳಗಾದ ಇವು ನಾನಾ ಪ್ರಕಾರವಾದ ಪರ್ಯಾಯ-ಅವಸ್ಥೆಗಳನ್ನು ಧರಿಸುತ್ತಿರುವವು. ಕರ್ಮದ ಪ್ರಭಾವದಿಂದಲೇ ಪ್ರಾಣಿವರ್ಗವು ಸಂಸಾರದಲ್ಲಿ ಅನೇಕ ಅವಸ್ಥೆಗಳನ್ನು ಹೊಂದುತ್ತಿವೆ. ಕರ್ಮದ ಭೇದದಿಂದಲೇ ಈ ಸಂಪೂರ್ಣಜೀವಲೋಕವು ಭೇದರೂಪವಾಗಿದೆ. ಜೀವದ ಈ ಅವಸ್ಥೆಗೆ ವಿಭಾವಪರಿಣತಿಯೆಂದು ಹೆಸರು.

ಎಷ್ಟರ ವರೆಗೆ ಯಾವುದೊಂದು ಜೀವದ ಈ ವಿಭಾವಪರಿಣತಿಯು ನಷ್ಟವಾಗುವದಿಲ್ಲವೋ ಅಷ್ಟರ ವರೆಗೆ ಆ ಜೀವವು ಸಂಸಾರಿಯೆಂದು ಕರೆಯಲ್ಪಡುತ್ತದೆ. ವಿಭಾವಪರಿಣತಿಯು ಇರುವ ವರೆಗೆ ಜೀವಕ್ಕೆ ಸಂಸಾರದಲ್ಲಿ ಕರ್ಮಾನುಸಾರವಾಗಿ ನಾನಾ ವಿಧವಾದ ರೂಪವನ್ನು ಧರಿಸಿ ಕೊಳ್ಳುತ್ತಾ ದುಃಖವನ್ನನುಭವಿಸಬೇಕಾಗುವುದು. ಯೋಗ್ಯ ಸಾಮಗ್ರಿಗಳ ಸಾಮರ್ಥ್ಯದಿಂದ ಈ ವಿಭಾವಪರಿಣತಿಯು ನಷ್ಟವಾಗುವುದುಂಟು. ಆಗ ಜೀವವು ಕರ್ಮದ ಬೇಡಿಯಿಂದ ಬಿಡುಗಡೆಯನ್ನು ಹೊಂದಿ ನಿಜಸ್ವಭಾವವನ್ನು ಪೂರ್ಣವಾಗಿ ಪಡೆದು ಸಂಸಾರಭ್ರಮಣದಿಂದ ಮುಕ್ತವಾಗಿ 'ಮುಕ್ತಿ'ಯನ್ನು ಪಡೆಯುವುದು.

ಜೀವವು ಮುಕ್ತಾವಸ್ಥೆಯಲ್ಲಿ ಮುಕ್ತ, ಸಿದ್ಧ, ಪರಮಾತ್ಮ, ಪರಮೇಶ್ವರ—ಮೊದಲಾದ ಹೆಸರುಗಳಿಂದ ಸಂಬೋಧಿಸಲ್ಪಡುವುದು. ಹೀಗೆ

ಪರ್ಯಾಯದೃಷ್ಟಿಯಿಂದ ಸಂಸಾರಿಜೀವಗಳೆಂದೂ ಮುಕ್ತಜೀವಗಳೆಂದೂ ಜೀವಗಳಲ್ಲಿ ಎರಡು ಮುಖ್ಯ ಭೇದಗಳು. ಅವಿಕಸಿತ, ಅಲ್ಪವಿಕಸಿತ, ಬಹು ವಿಕಸಿತ ಮತ್ತು ಪೂರ್ಣವಿಕಸಿತ—ಹೀಗೆ ಅವುಗಳನ್ನು ನಾಲ್ಕು ತರಗತಿ ಗಳಾಗಿಯೂ ವಿಭಾಗಿಸಬಹುದು. ಆತ್ಮಗುಣಗಳ ವಿಕಾಸವು ಎಲ್ಲರಿಗೂ ಅಭೀಷ್ಟವಾಗಿರುವುದರಿಂದ ಅವಿಕಸಿತ ಅಥವಾ ಅಲ್ಪವಿಕಸಿತ ಜೀವಗಳಿಗೆ ಅಧಿಕಾಧಿಕ ವಿಕಸಿತಜೀವಗಳು ಸ್ವಭಾವದಿಂದಲೆ ಪೂಜ್ಯವೂ ಆರಾಧ್ಯವೂ ಆಗಿವೆ.

ಆದುದರಿಂದ ಹಿತವನ್ನು ಕೋರುವ ಪ್ರತಿಯೊಂದು ಸಂಸಾರಿಜೀವವೂ ತನ್ನ ವಿಭಾವಪರಿಣತಿಯನ್ನು ಬಿಟ್ಟು ಸ್ವಭಾವಪರಿಣತಿರೂಪವಾದ ಮುಕ್ತಿ ಗೋಸ್ಕರ ಪ್ರಯತ್ನ ಮಾಡಬೇಕು. ಇದಕ್ಕೋಸ್ಕರ ಆತ್ಮಗುಣಗಳ ಪರಿ ಚಯವೂ ಆ ಗುಣಗಳಲ್ಲಿ ಹೆಚ್ಚುಹೆಚ್ಚಾಗಿ ಬೆಳೆಯುತ್ತಿರುವ ಅನುರಾಗವೂ ವಿಕಾಸಮಾರ್ಗದಲ್ಲಿ ದೃಢನಂಬಿಕೆಯೂ ಆವಶ್ಯಕ. ಅನುರಾಗದ ಹೊರತು ಯಾವುದೊಂದು ಗುಣವೂ ಪ್ರಾಪ್ತವಾಗಲಾರದು. ಅನನುರಾಗಿಯು ಅಥವಾ ಅಭಕ್ತನು ಗುಣಗ್ರಹಣಕ್ಕೆ ಪಾತ್ರನೇ ಅಲ್ಲ. ಪರಿಚಯದ ಹೊರತು ಅನುರಾಗವು ವೃದ್ಧಿಯಾಗಲಾರದು. ಹಾಗೆಯೇ ವಿಕಾಸಮಾರ್ಗದಲ್ಲಿ ದೃಢನಂಬಿಕೆಯು ಇಲ್ಲದೆ ಹೋದರೆ ಗುಣಗಳ ವಿಕಾಸವು ಹಾಗೂ ಯಥೇಷ್ಟ ಪ್ರವೃತ್ತಿಯು ಉಂಟಾಗಲಾರದು. ಆದುದರಿಂದ ಸ್ವಕಲ್ಯಾಣಾ ಪೇಕ್ಷಿಗಳು ಪೂಜ್ಯರಾದ ಆ ಮುಕ್ತಾತ್ಮರ ಶರಣವನ್ನು ಹೊಂದಬೇಕು; ಆ ಮಹಾಪುರುಷರ ಉಪಾಸನೆಯನ್ನು ಮಾಡಬೇಕು; ಅವರ ಗುಣಗಳಲ್ಲಿ ಅನುರಾಗವನ್ನು ವೃದ್ಧಿಮಾಡಬೇಕು; ಅವರನ್ನು ಮಾರ್ಗದರ್ಶಕರನ್ನಾ ಗಿಟ್ಟುಕೊಂಡು ಅವರ ಹಿತಶಿಕ್ಷೆಗಳನ್ನು ಪ್ರೀತಿಯಿಂದ ಗ್ರಹಣ ಮಾಡಿ ಅವರು ತೋರಿಸಿ ಕೊಡುವ ಮಾರ್ಗದಲ್ಲಿ ನಡೆಯಬೇಕು.

ಆ ಹಿತಶಿಕ್ಷೆಗಳಿಂದಲೇ ಆತ್ಮಗುಣಗಳ ವಿಕಾಸವು ಅಧಿಕಾಧಿಕರೂಪ ದಲ್ಲಿ ಅಥವಾ ಪೂರ್ಣರೂಪದಲ್ಲಿ ವಿಕಾಸವನ್ನು ಹೊಂದುವುದು. ಇದೇ ಪ್ರತಿಯೊಂದು ಜೀವಕ್ಕೆ ಆತ್ಮಕಲ್ಯಾಣದ ಸರಳಮಾರ್ಗವು. ನಿಜವಾಗಿ ಅಂತಹ ಮಹಾತ್ಮರ ವಿಕಸಿತ ಆತ್ಮಸ್ವರೂಪದ ಭಜನಕೀರ್ತನಾದಿಗಳೇ ಸಂಸಾರಿಗಳಾದ ನಮಗೆ ನಮ್ಮ ಆತ್ಮಗಳ ಅನುಭವ ಮತ್ತು ಮನನ.

ನಾವು 'ಸೋಽಹಮ್' (ಅವನೇ ನಾನು) ಎಂಬ ಭಾವನೆಯ ಮೂಲಕ ವಾಗಿ ಅವರನ್ನು ನಮ್ಮ ಜೀವನದಲ್ಲಿ ಕಾಣಬಲ್ಲೆವು; ಅವರ ಆದರ್ಶ ವನ್ನು ಮುಂದಿಟ್ಟು ನಮ್ಮ ಚರಿತ್ರವನ್ನು ದೃಢಮಾಡಬಲ್ಲೆವು; ಆತ್ಮೀಯ ಗುಣಗಳ ವಿಕಾಸವನ್ನು ಸಿದ್ಧಮಾಡಿ ನಾವು ತದ್ರೂಪವಾಗಬಲ್ಲೆವು. ಈ ಎಲ್ಲಾ ಅನುಷ್ಠಾನಗಳು ಆ ಮಹಾಪುರುಷರನ್ನು ಸಂತೋಷಪಡಿಸುವುದ ಕ್ಕೋಸ್ಕರವಲ್ಲ. ಈ ಅನುಷ್ಠಾನಗಳಿಂದ ಅವರಿಗೆ ಯಾವುದೊಂದೂ ಲಾಭವಿಲ್ಲ. ಇವು ನಮ್ಮ ಉನ್ನತಿಗೋಸ್ಕರವೇ ಆಚರಿಸಲ್ಪಡುವುವು. ಆದುದರಿಂದಲೇ ಮುಕ್ತಿಸಿದ್ಧಿಯ ಸಾಧನಗಳಲ್ಲಿ 'ಭಕ್ತಿ'ಯು ಒಂದು ಪ್ರಧಾನಸಾಧನವಾಗಿದೆ. ಇದನ್ನು "ಭಕ್ತಿಮಾರ್ಗ"ವೆಂದೂ ಕರೆಯು ತ್ತಾರೆ.

ಆತ್ಮೋತ್ಕರ್ಷಕ್ಕಾಗಿ ಸಿದ್ಧಿಯನ್ನು ಪಡೆದ ಶುದ್ಧಾತ್ಮರನ್ನು ಭಕ್ತಿಯ ಮೂಲಕವಾಗಿ ಆರಾಧಿಸುವುದೇ ಭಕ್ತಿಯೋಗ. ಗುಣಗಳಲ್ಲಿ ಅನುರಾಗ ವನ್ನಿಡುವುದು, ತದನುಕೂಲವಾಗಿ ವರ್ತಿಸುವುದು, ಅಥವಾ ಗುಣಾನು ರಾಗಪೂರ್ವಕವಾಗಿ ಮಾಡಲ್ಪಡುವ ಆದರ-ಸತ್ಕಾರವು ಭಕ್ತಿಯೆಂದು ಕರೆ ಯಲ್ಪಡುತ್ತದೆ. ಸ್ತುತಿ, ಪ್ರಾರ್ಥನೆ, ವಂದನೆ, ಉಪಾಸನೆ, ಪೂಜೆ, ಸೇವೆ, ಶ್ರದ್ಧೆ, ಆರಾಧನೆ— ಮೊದಲಾದುವುಗಳೆಲ್ಲಾ ಭಕ್ತಿಯ ರೂಪಗಳು ಅಥವಾ ನಾಮಾಂತರಗಳು.

ಸದ್ಭಕ್ತಿಯಿಂದ ಅಹಂಕಾರಾದಿದೋಷಗಳು ನಷ್ಟವಾಗಿ ಗುಣಾನು ರಾಗವು ಹೆಚ್ಚುವದರಿಂದ ಶುಭ ಪರಿಣಾಮವು ದೊರಕುವುದು. ಪರಿ ಣಾಮಗಳ ಶುದ್ಧಿಯಿಂದ ಸಂಚಿತ ಕರ್ಮವು ನಷ್ಟವಾಗುತ್ತದೆ. ಸಂಚಿತ ಕರ್ಮಗಳ ನಾಶದಿಂದಲೇ ಗುಣಾನುರೋಧಕ ಕರ್ಮಗಳ ಬಲವು ಕುಂದಿ ಅಭೀಷ್ಟ ಗುಣಗಳು ತಲೆದೋರುವವು. ಇದರಿಂದಲೂ ಆತ್ಮವಿಕಾಸವನ್ನು ಸಾಧಿಸಬಹುದಾಗಿರುತ್ತದೆ. ಆದುದರಿಂದಲೇ ದೊಡ್ಡ ದೊಡ್ಡ ಮಹರ್ಷಿ ಗಳು ಪರಮಾತ್ಮನ ಸ್ತುತಿರೂಪದಲ್ಲಿ ಪ್ರಯೋಗಿಸಲ್ಪಟ್ಟ ಈ ಭಕ್ತಿಯನ್ನು ಶುಭಪರಿಣಾಮಕ್ಕೆ ಕಾರಣವನ್ನಾಗಿ ತಿಳಿಸಿ ಇದರಿಂದ ಮೋಕ್ಷಮಾರ್ಗವು ಸುಲಭವಾಗಿ ಸ್ವಾಧೀನವಾಗುವುದೆಂದು ಅಪ್ಪಣೆ ಕೊಡಿಸಿರುತ್ತಾರೆ.

ಈ 'ಸ್ತೋತ್ರಸಂಗ್ರಹ'ದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ

ಶಾಶ್ವತವಾದ ಕೀರ್ತಿಯನ್ನು ಗಳಿಸಿಕೊಂಡಿರುವ ಪ್ರಸಿದ್ಧ ಪ್ರಸಿದ್ಧ ಕವಿ ಹಾಗೂ ಮಹಾಕವಿಗಳ ಕೃತಿಗಳಿಂದ ಕೆಲವು ಸ್ತುತಿಗಳನ್ನು ಸಂಗ್ರಹಿಸಿ ಕೊಟ್ಟಿರುತ್ತೇನೆ. ಇಂತಹ ಒಂದು ಸಂಗ್ರಹವು ಅಗತ್ಯವೆಂದು ಯೋಚಿಸಿ ಈ ಸಂಗ್ರಹವನ್ನು ಸಿದ್ಧಮಾಡಿ ಬಹಳ ಕಾಲವಾದರೂ ಪ್ರಕಾಶಕರು ದೊರಕದಿದ್ದುದರಿಂದಲೂ ಇನ್ನು ಕೆಲವು ಕಾರಣಗಳಿಂದಲೂ ಇದು ಇಷ್ಟರ ವರೆಗೆ ಬೆಳಕಿಗೆ ಬರಲಿಲ್ಲ.

ಕೆಲವು ದಿವಸಗಳ ಹಿಂದೆ ಪೂಜ್ಯ ಶ್ರೀ ೧೦೫ ಕ್ಷುಲ್ಲಕ ಅತಿಬಲ ಮಹಾರಾಜರಲ್ಲಿ ಈ ವಿಷಯವಾಗಿ ಪ್ರಾರ್ಥಿಸಿಕೊಂಡ ಪ್ರಕಾರ ಇವರು ಈ ಸಂಗ್ರಹವನ್ನು ಮುದ್ರಣ ಮಾಡಿಸುವ ವ್ಯಯವನ್ನು ಕೊಡಿಸಿರುವಂತೆ ಇದನ್ನು ಮುದ್ರಣ ಮಾಡಿಸಿರುತ್ತದೆ. ಧರ್ಮಪ್ರಚಾರಕ್ಕೆ ಆ ಧರ್ಮದ ಸಾಹಿತ್ಯದ ಪ್ರಚಾರವು ಅತ್ಯಗತ್ಯವೆಂಬ ಅಂಶವನ್ನು ಪ್ರತಿಯೊಬ್ಬನು ಒಪ್ಪತಕ್ಕ ಮಾತಾಗಿದೆ. ಹೀಗಿರುತ್ತಾ ಮುಖ್ಯವಾಗಿ ನಮ್ಮ ದಿಗಂಬರ ಜೈನ ಸಮಾಜವು ಈ ಆವಶ್ಯಕ ಕಾರ್ಯದಲ್ಲಿ ಹಿಂದುಳಿದಿರುವುದು ಖೇದವನ್ನುಂಟುಮಾಡುವ ವಿಷಯ. ಆದರೂ ಇತ್ತೀಚೆಗೆ ಕೆಲವು ತ್ಯಾಗಿಗಳ ಲಕ್ಷ್ಯವು ಈ ಆವಶ್ಯಕ ಶುಭಕಾರ್ಯದ ಕಡೆಗೆ ಹೋಗಿರುವುದು ಒಂದು ಶುಭಚಿಹ್ನೆಯೆಂದೇ ಹೇಳಬೇಕಾಗಿದೆ.

ಈ ಸಂಗ್ರಹದಲ್ಲಿ ಸೇರಿರುವ ಸ್ತೋತ್ರಗಳ ಪ್ರಣೇತರ ಸಂಕ್ಷಿಪ್ತ ಪರಿಚಯವನ್ನೂ ಪ್ರತ್ಯೇಕ ಸ್ತುತಿಯ ಪ್ರಾರಂಭದಲ್ಲಿ ಅಥವಾ ಪರಿಶಿಷ್ಟ ರೂಪವಾಗಿ ಕೊನೆಯಲ್ಲಿ ಕೊಡಬೇಕೆಂದು ಮನಸ್ಸಿದ್ದರೂ ಸಂಗ್ರಹದ ಕಾಯವು ಬೆಳೆಯಬಹುದೆಂಬ ಭಯದಿಂದ ನನ್ನ ಈ ಲೋಭವನ್ನು ತಡೆಯಬೇಕಾಯಿತು.

ಕೊನೆಯಲ್ಲಿ ಈ ಸಂಗ್ರಹವನ್ನು ಮುದ್ರಣ ಮಾಡಿಸಲು ದ್ರವ್ಯ ಸಹಾಯವನ್ನು ಮಾಡಿಸಿರುವ ಪೂಜ್ಯ ಶ್ರೀ ಅತಿಬಲ ಮಹಾರಾಜರಿಗೂ ಸಂಗ್ರಹವನ್ನು ಆಮೂಲಾಗ್ರ ನೋಡಿ ಯೋಗ್ಯ ಸಲಹೆಯನ್ನಿತ್ತು ಸಮುಚಿತವಾದ ಮುನ್ನುಡಿಯನ್ನು ಬರಕೊಟ್ಟ ಹಿರಿಯ ಸಾಹಿತಿಗಳೂ ಮದ್ರಾಸು ಸರಕಾರದ ಆಸ್ಥಾನ ಕವಿಗಳೂ ನನ್ನ ಮಿತ್ರರೂ ಆದ ಶ್ರೀಮಾನ್ ಗೋವಿಂದ ಪೈ ಇವರಿಗೂ ನಾನು ತುಂಬಾ ಕೃತಜ್ಞನಾಗಿರುತ್ತೇನೆ.

**ಕೆ. ಭುಜಬಲಿ ಶಾಸ್ತ್ರಿ.**

---

## ೧. ಪಂಪನ ಆದಿಪುರಾಣದಿಂದ (ಕ್ರಿ. ಶ. ೯೪೨)

ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್ಸ್ವಾಮಿ ಸಂ
ದಾದಿಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ ।
ಚ್ಛೇದೋಪಾಯನಿಯುಕ್ತ ಸೂಕ್ತಿ ವೃಷಮಾರ್ಗಾಗ್ರೇಸರಂ ಪಾಪಹೃ
ತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ॥ ೧ ॥

ಪೆಣೆದೆಂಟುಂ ಕಿಲ್ಬಿಷಂಗಳ್ಕಿಡೆ ಕಿಡದಗುಣಂ ಪೊರ್ದೆ ಬಂದೆಂಟುಮಾದಂ
ತಣಿವಂ ಕೈಕೊಂಡಮೂರ್ತರ್ಚರಮತನು ಸಮಾಕಾರರುದ್ಧೂತಲೇಪರ್ ।
ಪ್ರಣುತರ್ನಿತ್ಯರ್ಜಗನ್ಮಂಗಳನಿಳಯರನಂತರ್ತ್ರಿಲೋಕೈಕಚೂಡಾ
ಮಣಿಗಳ್ಸಿದ್ಧರ್ಸ್ವಕೀಯಪ್ರಭುತೆಯನೆಮಗಂ ಮಾಳ್ಕತಿಪ್ರೀತಿಯಿಂದಂ ॥ ೨ ॥

ಮೂವತ್ತಾಱುಂ ಗುಣಂಗಳ್ತಮಗಮರ್ದಿರೆ ಸಂದೈದುಮಾಚಾರದೊಳ್ಸ
ದ್ಭಾವಂ ಕೈಗಣ್ಮೆ ಶಿಷ್ಯಾಚರಣವಿಧಿಗಳಂ ತೀರ್ದೆ ಕಾರುಣ್ಯದಿಂದಂ ।
ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯರಿನ್ನೆಮ್ಮನೇನೋ
ದಾವಂ ತಳ್ತಟ್ಟಿದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ ॥ ೩ ॥

ಹೇಯಂಗಳ್ ಖಳಕರ್ಮಬಂಧನಕರಕ್ರೋಧಾದಿಗಳ್ ಮತ್ತುಪಾ
ದೇಯಂಗಳ್ ದುರಿತೇಂಧನಾನಳಲಸದ್ರತ್ನತ್ರಯಂಗಳ್ ಸುಖೋ ।
ಪಾಯಂಗಳ್ ಗಡಿಮೆಂದು ಭವ್ಯಜನಮಂ ಕಣ್ಣೊಱೆ ಕಲ್ಪಿಪ್ಪುಪಾ
ಧ್ಯಾಯರ್ ಜ್ಯೋತಿಸುಗೆಮ್ಮ ಚಿತ್ತಗೃಹದೊಳ್ರತ್ನತ್ರಯಜ್ಯೋತಿಯಂ ॥ ೪ ॥

ಬಗೆಯೊಳ್ಪೊಣ್ಮೆ ದಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಮಾ
ವಗಮಾವಶ್ಯಕದೊಳ್ತಗುಳ್ಪು ಪಲವುಂ ಶೀಲಂಗಳಂ ತಾಳ್ದಿದಂ ।
ದುಗವೆಂದುಂ ತಮಗಾಗದಂತೆಸಗುವರ್ ಸರ್ವೋತ್ತಮರ್ ಸರ್ವ ಸಾ
ಧುಗಳೋರಂತೆ ಕಳಲ್ಚುಗೆಮ್ಮ ಮನದಿಂ ದುರ್ಮೋಹಸಂದೋಹಮಂ ॥ ೫ ॥

ಕಾರ್ಯಮೆಮಗಿದುವೆ ಶಿವಪದ
ಪರ್ಯಂತಂ ಬರಮಮೋಘಮುದ್ಧರಿಸುಗೆ ತಾ ।
ತ್ಪರ್ಯದಿನರ್ಹತ್ಸಿದ್ಧಾ
ಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ ॥ ೬ ॥

## ೨. ಪೊನ್ನನ ಶಾಂತಿಪುರಾಣದಿಂದ (ಕ್ರಿ. ಶ. ಸು. ೯೫೦)

ಪರಮಶ್ರೀ ಸ್ನೇಹಗೇಹಾಯತ ಪದಕಮಲಂ ಚೇತನಾಚೇತನಾಂಗ
ಸ್ಫುರಿತಾಘೌಘಚ್ಛಿದಂ ಭಾಸುರಸುರನರಸದ್ಭವ್ಯಸೇವ್ಯಂ ವಚೋ ವಿ।
ಸ್ತುರತೃಪ್ತಿವ್ಯಾಪ್ತ ಲೋಕತ್ರಿತಯನಪಗತಾಶೇಷ ದೋಷಾಳಿಮುಕ್ತಿ
ಸ್ಥಿರಸೌಖ್ಯಾಂಭಃ ಸ್ವಯಂಭೂರಮಣಜಲಧಿ ರಕ್ಷಿಕ್ಕೆ ಶಾಂತೀಶನೆಮ್ಮಂ ॥ ೧ ॥

ಕೇಶೋತ್ಪಾಟನದಂದು ಭಾವಿಸೆ ನಮಸ್ಸಿದ್ಧೇಭ್ಯ ಎಂದಾದಿತೀ
ರ್ಥೇಶರ್ ವಂದಿಸಿ ದೀಕ್ಷೆಗೆಯ್ದರಜರರ್ ಸಿದ್ಧಂ ನಮಾದ್ಯಂ ಜಗ।
ಕ್ಕಾ ಶುದ್ಧಾಕ್ಷರಮೆಂಬ ಸುದ್ದಗೆಯುಮಿಂತಾರ್ ಪೂಜ್ಯರೆಂದಾಂ ಭವ
ಕ್ಲೇಶೋಚ್ಛಿತ್ತಿನಿಮಿತ್ತದಿಂದೆಱಗುವೆಂ ಸಿದ್ಧಾಂಘ್ರಿಪದ್ಮಂಗಳೊಳ್ ॥ ೨ ॥

ವೀರಜಿನೇಂದ್ರನಿಂ ಗಣಧರಾಗ್ರಣಿಯಿಂ ಕ್ರಮದಿಂದೆ ಬಂದ ವಿ
ಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿನಂ ಸದಾ।
ಚಾರಸಮೇತರಾದರೆಮಗೀಗೆ ಶಿವಾಸ್ಪದ ಮುಖ್ಯ ಸೌಖ್ಯಮಂ
ಸೂರಿಗಳಂಗಜಾರಿಗಳತತ್ತ್ವವಿದಾರಿಗಳುದ್ಧಚಾರಿಗಳ್ ॥ ೩ ॥

ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಱ
ಶ್ರೀಯ ಪೊದಟ್ಕೆಯಂ ಬೆಳಗೆ ಸೌಗತ ಸಾಂಖ್ಯಶಿವಾಗಮಂಗಳಂ।
ನ್ಯಾಯನಯಪ್ರಮಾಣ ಸುವಚಃಕ್ರಮದಿಂ ಸಲೆ ಸೋಲೆಗೆಲ್ದುಪಾ
ಧ್ಯಾಯರಜೇಯರೀಗೆಮಗೆ ಮುಕ್ತಿನಿವೇಶಮನಪ್ರಣಾಶಮಂ ॥ ೪ ॥

ಬಗೆ ಶುದ್ಧಂ ತನುಶುದ್ಧಮಾಸ್ತುತಿಪದಾರ್ಥಂ ಶುದ್ಧಮಿಂತೀ ತ್ರಿಶು
ದ್ಧಿಗಳಿಂ ಧ್ಯಾನಿಸುವೆಮ್ಮ ನೋತೆಱಗುವೆಮ್ಮಂ ಬಂದಿಪೆಮ್ಮಂ ತ್ರಿಕಾ।
ಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ ಸರ್ವಸಾ
ಧುಗಣಂ ಸಾಧುಗಳಪ್ಪೆವಾ ಪರಕೆಯಿಂದಾಮುಂ ವ್ರತವ್ರಾತದೊಳ್ ॥ ೫ ॥

## ೩. ರನ್ನನ ಅಜಿತಪುರಾಣದಿಂದ (ಕ್ರಿ. ಶ. ೯೯೩)

ಶ್ರೀಮನ್ನಮ್ರಾಮರೇಂದ್ರಾರುಣ ಮಣಿಮುಕುಟದ್ಯೋತ ಬಾಲಾರ್ಕಲೀಲೋ
ದ್ದಾಮಂ ಕಾಶ್ಮೀರರಾಗಂ ತನಗೆ ವಿನತನಾಗೇಂದ್ರಹಸ್ತಾರುಣಾಬ್ಜಂ ।
ಹೈಮಂ ಕರ್ಣಾವತಂಸಂ ತನಗೆನೆ ಕರವೊಪ್ಪಿರ್ದಳಾರ್ಹಂತ ಲಕ್ಷ್ಮೀ
ಧಾಮಂ ಮಾೞ್ಕೆಮ್ಮ ಹೃತ್ಪದ್ಮಮನಜಿತಜಿನೇಂದ್ರ
ಕ್ರಮಾಂಭೋರುಹ ಶ್ರೀ ॥ ೧ ॥

ಮೊದಲೊಳ್ ಸಿದ್ಧಭಕ್ತಿ ಸಕಳಕ್ರಿಯೆಗಾದುದು ಸಿದ್ಧಮಾತೃಕಾ
ಪದವಿಗೆ ತಾನೆ ಮೊತ್ತಮೊದಲಾದುದದಱಿಮಲ್ಲದೆ ಸಿದ್ಧಶೇಷೆಯೆಂ ।
ಬುದು ಶುಭವಾಕ್ಯಮಾಯ್ತೆನಿಪ ಸಿದ್ಧರನಂತಸುಖಪ್ರಯುಕ್ತರ
ಭ್ಯುದಯಸುಖಂಗಳಂ ನಮಗೆ ಮಾಡಿ ನಿಮಿರ್ಚುಗೆ ಕಾವ್ಯಸಿದ್ಧಿಯಂ ॥ ೨ ॥

ನೆಗೞ್ದುತ್ತಮ ಜೈನಮಾರ್ಗರುಚಿಯಿಂ ಚಾರಿತ್ರಸಂಸಿದ್ಧಿಯೊಳ್
ನೆಗೞ್ವಶಿಷ್ಯರುಮಂ ನೆಗೞ್ಚುವರದಱಾಚಾರ್ಯರೆಂಬೀ ಪೆಸರ್ ।
ಜಗತೀವ್ಯಾಪಕಮಾಗೆ ತಾಮೆ ಕಣಿಯಾಗಿರ್ದರ್ ಗುಣಂಗಳ್ಗೆ ಭ
ವ್ಯಗಣಂಗಳ್ಗಮದಂ ನಿಮಿರ್ಚಿ ಮೆಱೆಗಾಚಾರ್ಯರ್ ನಿಜೌದಾರ್ಯಮಂ ॥ ೩ ॥

ಇವು ಸುಜ್ಞಾನದ ಸಲ್ವ ಬಟ್ಟೆಗಳಿವಜ್ಞಾನಾಂಧಕೂಪಂಗಳೆಂ
ದು ವಿಶುದ್ಧೋದಿತಬುದ್ಧಿಯಿಂದಱಿಪಿ ಲಾಭಖ್ಯಾತಿಪೂಜಾನಪೇ ।
ಕ್ಷೆ ವಿನೇಯರ್ಕಳೊಳಾಗೆ ತತ್ತ್ವಗೃಹದೊಳ್ ರತ್ನಪ್ರದೀಪಂಗಳಿ
ರ್ಪವೊಲಿರ್ಪರ್ ನಿರಪಾಯದೀಗೆಮಗುಪಾಧ್ಯಾಯರ್ ಸುಖೋಪಾಯಮಂ ॥
॥ ೪ ॥

ಭವಕಾಂತಾರವಿಹಾರದೊಳ್ ವಿಷಯಮಂ ವಿಚ್ಛೇದಿಸಲ್ ಚಿತ್ತಸಂ
ಭವನಂ ಸಂಹರಿಸಲ್ ಕಷಾಯಭಟರಂ ಬೆನ್ನಟ್ಟಲೊಪ್ಪೀ ಮಹಾ ।
ವ್ಯವಸಾಯಂ ತಮಗಾಗೆ ಭವ್ಯಜನಕೆಲ್ಲಂ ಶಾಂತಿಮಿಚ್ಛಂತಿ ಸಾ
ಧವ ಎಂಬುತ್ತಮ ಸಾಧುವರ್ಗಮೆ ನೆರಂ ಸ್ವರ್ಗಾಪವರ್ಗಂಬರಂ ॥ ೫ ॥

## ೪. ಶಾಂತಿನಾಥನ ಸುಕುಮಾರ ಚರಿತೆಯಿಂದ

(ಕ್ರಿ. ಶ. ೧೦೬೮)

ಶ್ರೀಮನ್ನಾಕಾಧಿನಾಥಾನತ ಮಕುಟಮಣಿದ್ಯೋತಿತಾಂಘ್ರಿದ್ವಯಂ ನಿಃ
ಕಾಮಂ ಶ್ರೀವರ್ಧಮಾನಪ್ರವರ ಮುನಿಜನಾನಂದಸಂಸ್ತುತ್ಯ ಸಿಂಧು ।
ಸ್ತೋಮಾಳಂಕಾರಿತಾಂಭೋಸಿಧಿ ನಿರುಪಮಬೋಧಾಕರಂ ಮೋಕ್ಷಲಕ್ಷ್ಮೀ
ಧಾಮಂ ತ್ರೈಳೋಕ್ಯನಾಥಂ ಕುಡುಗೆಮಗಮೃತಾವಾಸಮಂ ವೀರನಾಥಂ ॥ ೧ ॥

ಪರಮಾನಂತಚತುಷ್ಟಯೈಕನಿಳಯರ್ ಲೋಕೈಕಪೂಜ್ಯರ್ ಪ್ರಸಿ
ದ್ಧರಮೂರ್ತರ್ ನಿರಪಾಯರಕ್ಷಯರಜೇಯರ್ ನಿಷ್ಠಿತಾತ್ಮರ್ ಜಗ ।
ದ್ಗುರುಗಳ್ ಕರ್ಮಕಲಂಕಪಂಕರಹಿತರ್ ತ್ತಾಮೆಂಬಿನಂ ನಂದ ನಿ
ದ ರನಂತರ್ ದಯಗೆಯ್ವರಕ್ಕೆಮಗನಸ್ತೋದಾತ್ಮಸಂಸಿದ್ಧಿಯಂ ॥ ೨ ॥

ಇರೆ ಷಟ್ತ್ರಿಂಶದ್ಗುಣಂಗಳ್ ತಮಗಮರ್ದಿರಲಾಚಾರಮುಯ್ದುಂ ಬೆಡಂಗಿಂ
ದೊರೆವೆತ್ತತ್ಯಂತಮಾಗುತ್ತಿರಲಧಿಗಮ ಶಿಷ್ಯೋತ್ಕರಾನುಗ್ರಹತ್ವಂ ।
ನಿರುತಂ ಕೈಗಣ್ಮೆ ಪೊಣ್ಮುತ್ತಿರಲೆಸಗುವಚಾರಿತ್ರಸಂಪುಷ್ಟರೀ ದು
ಸ್ತರಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮರಾಚಾರ್ಯ
ರೆಮ್ಮಂ ॥ ೩ ॥

ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿಮಾ ದುಃಪಾಪದುರ್ಮಾರ್ಗಮಂ
ಕಿಡಿಸಿಂ ಶಲ್ಯಕಷಾಯವರ್ಗರಿಪುವಂ ರತ್ನತ್ರಯಜ್ಯೋತಿಯಿಂ ।
ಪಡೆಯಿಂ ವೀಮೆನುತಂ ವಿನೇಯಜನಮಂ ಕಲ್ಪಿಪ್ಪುಪಾಧ್ಯಾಯರಾ
ಗಡಮೆಮ್ಮಂ ಮನಮೊಲ್ದು ಕಲ್ಪಿಸುಗೆ ಸನ್ಮಾರ್ಗೋಪದೇಶಂಗಳಂ ॥ ೪ ॥

ಪಗೆ ಕರ್ಮಂ ಪೆಱವಲ್ಲವೆಂದಘಕುಲ ಪ್ರಧ್ವಂಸನೋಪಾಯಮಂ
ಬಗೆಯುತ್ತುಂ ಸಮಸಂದಮೂಲಗುಣಮಿಪ್ಪತ್ತೆಂಟುಮಂ ತಾಳ್ದಿನಂ ।
ಮಿಗೆಯಿಂ ಮಿಕ್ಕಱಿವಿಂ ಸದಾಚರಿತದಿಂ ಸನ್ಮಾರ್ಗವಿಂ ಸ್ವಲ್ಪ ಸಾ
ಧುಗಳೆಮ್ಮಂ ದಯೆಯಿಂದ ಬೋಧಿಸುತಮಿಕ್ಕೆಂದುಂ
ಜಿನೇಂದ್ರೋಕ್ತಿಯಂ ॥ ೫ ॥

## ೫. ನಯಸೇನನ ಧರ್ಮಾಮೃತದಿಂದ
## (ಕ್ರಿ. ಶ. ೧೧೧೨)

ಶ್ರೀರಾಮಾರಮಣೀಯಪಾದಸರಸೀಜಾತಂ ನಿಲಿಂಪೇಂದ್ರವೃಂ
ದಾರಾಧ್ಯಂ ಭುವನತ್ರಯಪ್ರಭು ವಿನೇಯಾನೀಕಕಲ್ಪದ್ರುಮಂ ।
ಧೀರಂ ನಿತ್ಯನನಂತನಕ್ಷಯಸುಖಂ ಮುಕ್ತ್ಯಂಗನೇಶಂ ಜಗ
ತ್ಸಾರಂ ವೀರಜಿನೇಂದ್ರನೀಗೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ॥ ೧ ॥

ಪುದಿದೆಂಟುಂ ಕರ್ಮಬಂಧಂ ಪಱಿವಡೆ ಕಿಡವೆಂಟುಂ ಗುಣಂಪೊರ್ದೆ ಲೋಕಾ
ಗ್ರದೊಳೋರಂತೊಪ್ಪಿ ನಿಂದಚ್ಯುತರಜಿತರಮೂರ್ತರ್ ಪ್ರಣೂತರ್ ಸು
ಸೌಖ್ಯಾ ।
ಭ್ಯುದಯರ್ ನಿತ್ಯಜರ್ ಜಗನ್ಮಂಗಳರಮಳ ಗುಣೋತ್ತುಂಗರುದ್ಧೂತಲೇಪರ್
ಮುದದಿಂ ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕೆ
ಕಾರುಣ್ಯದಿಂದಂ ॥ ೨ ॥

ವರಪಂಚಾಚಾರದೊಂದುನ್ನತಿಯೊಳಿವರೆ ಲೋಕೋತ್ತಮರ್ ವಿಶ್ವ ಸತ್ತ್ವೋ
ತ್ಕರಮಂ ರಕ್ಷಿಪ್ಪುಪಾಯಕ್ಕಿವರೆ ಧರಣಿಯೊಳ್ ಸಜ್ಜನರ್ ಪ್ರಸ್ತುತಭಾ ।
ಸುರಮುವ್ವತ್ತಾಱುಮತ್ಯುತ್ತಮ ಗುಣದೊಳಿವರ್ತಾಮೆ ಸತ್ಪೂಜ್ಯರೆಂಬಂ
ತಿರೆ ಮಿಕ್ಕಾಚಾರ್ಯವರ್ಯರ್ ಕರುಣದಿನಘನಿರ್ಮುಕ್ತರಂ ಮಾಡುಗೆಮ್ಮಂ ॥ ೩ ॥

ನುತಭವ್ಯಾನೀಕ ನೀಳಾಂಬುರುಹಮಲರೆ ಮಿಥ್ಯಾತ್ವಸೂರ್ಯಾಂಶು ಕುಂದಲ್
ಶ್ರುತದುಗ್ಧಾಂಬೋಧಿ ಪೆರ್ಚಲ್ ಜನನಿಗದಿತ ತತ್ತ್ವಾಂಶು ಪರ್ವಲ್ಸುರತ್ನ ।
ತ್ರಿತಯಾದ್ರೀಂದ್ರಾಗ್ರದೊಳ್ ಶೋಭಿಸುವನಘರುಪಾಧ್ಯಾಯತಾರಾಧಿಪರ್ ಸಂ
ತತಮಸ್ಮಚ್ಚಿತ್ತಗೇಹಾಂತರವಿಮಳತೆಯಂ ಮಾಳ್ಕೆ
ವಾಗ್ಜ್ಯೋತಿಯಿಂದಂ ॥ ೪ ॥

ಮನದೊಳ್ಕೈಗಣ್ಮಿ ಪೊಣ್ಮುತ್ತಿರೆ ದಯೆ ವರಚಾರಿತ್ರದೊಳ್ಪೆರ್ಚೆ ಶೀಲಂ
ಜಿನಪಾದಾಂಭೋಜದೊಳ್ತಳ್ತಿರೆ ಮತಿ ಜಿನತತ್ತ್ವಾಬ್ಧಿಯೊಳ್ ಸಂತತಂ ಭಾ ।
ವನೆ ಮತ್ತೋಲಾಡೆ ಕರ್ಮಾರಿಯನದಟಿಳಿವಾನಂದವೀರರ್ತಪಶ್ರೀ
ವನಿತಾಳಂಕಾರರೆಮ್ಮಿಂದಪಹರಿಸುಗೆ ದುರ್ಮೋಹಮಂ ಸಾಧುವರ್ಗಂ ॥ ೫ ॥

## ೬ ಕರ್ಣಪಾರ್ಯನ ನೇಮಿನಾಥ ಪುರಾಣದಿಂದ
### (ಕ್ರಿ. ಶ. ೧೧೪೦)

ಶ್ರೀಲೀಲಾಸದನಂ ನಿಜಾಂಘ್ರಿಕಮಳದ್ವಂದ್ವಂ ಲಸದ್ದಿವ್ಯವಾ
ಕ್ಶ್ರೀಲೀಲಾಸದನಂ ನಿಜಾಸ್ಯಕಮಳಂ ನಿಸ್ಸೀಮಕಾರುಣ್ಯಸು ।
ಶ್ರೀಲೀಲಾಸದನಂ ಸುಹೃತ್ಕಮಳಮಾದಕ್ಷೀಣನೀಗಕ್ಷಯ
ಶ್ರೀಲೀಲಾಸ್ಪದಮಂ ಸಮಂತು ನಮಗಂ ಶ್ರೀನೇಮಿಭಟ್ಟಾರಕಂ ॥ ೧ ॥

ದುರಘೌತಮೋ ವಿದೂರರವಿನಷ್ಟ ವಿಶಿಷ್ಟ ಗುಣಾಷ್ಟಕಾನ್ವಿತರ್
ಚರಮಸಮಗ್ರವಿಗ್ರಹಸಮರ್ ಭುವನತ್ರಿತಯಾಗ್ರಸಂಸ್ಥಿತರ್ ।
ಪರಮಪವಿತ್ರರಪ್ರತಿಮ ಸನ್ನುತಸಾರಸುಖೈಕಪಾತ್ರರೀ
ಗುರುತರಸಿದ್ಧಿಯಂ ನಮಗೆ ಸಿದ್ಧರನಂತ ಸುಖಪ್ರವೃದ್ಧಿಯಂ ॥ ೨ ॥

ನುತಷಟ್ತ್ರಿಂಶದ್ಗುಣಂಗಳ್ ನೆಱೆಯೆ ನಿರುತಮೋರಂತಿರಾಚಾರಮುಯ್ದು
ಸ್ಥಿತಮಾಗಲ್ ತಮ್ಮೊಳಾದಂ ನಿಯಮಿಸಿ ನಿಜಶಿಷ್ಯಾಳಿಯಂ
ಭೂರಿಭೂಮಿ ।
ಶ್ರುತರಾಗಿರ್ದಾರ್ಯವರ್ಯರ್ ವಿಜಿತವಿಷಯರಾಚಾರ್ಯ
ರಿನ್ನೆಮ್ಮನತ್ಯೂ
ರ್ಜಿತಬೋಧಾಧಾರರಪ್ಪಂತಿರೆ ನಿಱಿಸುಗೆ ಸದ್ಧರ್ಮದೊಳ್
ಕೂರ್ಮೆಯಿಂದಂ ॥ ೩ ॥

ಶ್ರೇಯಸ್ಕಾರಣಮೀ ವಿಶುದ್ಧವಿಲಸದ್ರತ್ನತ್ರಯಂ ನೋೞ್ಪೊಡ
ಶ್ರೇಯಸ್ಕಾರಣಮೀ ಕಷಾಯಜಯಮೆಂದಾದಂ ವಿನೇಯಾಳಿಯಂ ।
ಮಾಯಾದೂರತೆಯಿಂದೆ ಶಿಕ್ಷಿಪ ಜಗಜ್ಜ್ಯಾಯರ್ ನುತರ್ ಸಂದುಪಾ
ಧ್ಯಾಯರ್ ಮಾೞ್ಕೆಮಗಾಗಳುಂ ದಯೆಯಿನಾ ರತ್ನತ್ರಯ
ಪ್ರಾಪ್ತಿಯಂ ॥ ೪ ॥

ಒಗೆಯೆ ದಯಾರಸಂ ಬಗೆಯೊಳುತ್ಕಟಮಾಗಿರೆ ಸಚ್ಚರಿತ್ರಮುಂ
ತಗಣಿತಮಾಗಿ ತಮ್ಮಯ ನೆಗಳ್ತೆಯೊಳನ್ವಿತಮಾದ ಸದ್ಗುಣಂ ।
ಸೊಗಯಿಸೆ ಸಂದ ಸಾಧುಜನಮಕ್ಷಯ ಮೋಕ್ಷಸುಖೈಕಭಾಜನರ್
ವಿಗತವಿಷಾದರೀಗೆಮಗೆ ಸಂಸ್ತುತಮಪ್ಪ ಚರಿತ್ರವೃತ್ತಿಯಂ ॥ ೫ ॥

## ೭ ನೇಮಿಚಂದ್ರನ ಅರ್ಧನೇಮಿ ಪುರಾಣದಿಂದ
(ಕ್ರಿ. ಶ. ೧೧೭೦)

ಶ್ರೀಯಂ ಶ್ವೇತಾತಪತ್ರಂ ಪ್ರಥಿತವಿಭವಮಂ ಚಾಮರಂ ಬೋಧಮಂ ವಾ
ಕ್ಶ್ರೀಯೂಷಂ ಪೆರ್ಮೆಯಂ ಭಾಸುರತರಪಟಹಂ ಶಕ್ತಿಯಂ ಸಿಂಹಪೀಠಂ ।
ಸ್ವಾಯತ್ತಂ ಮಾಳ್ಪಿನಂ ಭಾವಳಯವಿಲಸಿತಾಶೋಕ ಮಂದಾರವರ್ಷ
ಚ್ಛಾಯಚ್ಛನ್ನಾಂಗನಾದಂ ತ್ರಿಭುವನವಿನುತಂ ನೇಮಿ ರಕ್ಷಿಕ್ಕೆ ನಮ್ಮಂ ॥ ೧ ॥

ಲೀಳಾಗಾತ್ರೈಕವವಲ್ಲೀ ಮುಕುಳಮೆಸಿಸೆ ನಾಸಾಗ್ರದೊಳ್ ಪಾಂಚಜನ್ಯಂ
ವ್ಯಾಳಂ ಶಯ್ಯಾತಳಂ ಪೂಗಣೆಯನೊಸೆದ್ಧೃತಂ ಕರ್ವುವಿಲ್ಲಾಗೆ ಶಾರ್ಙ್ಗಂ ।
ಹೇಳಾಕೃಷ್ಟಂ ಸಪುಷ್ಟಂ ಹರಿಮದಹರನಪ್ಪಂತೆ ಕಂದರ್ಪದರ್ಪ
ವ್ಯಾಳೋಳಕ್ರೀಡೆಗಾದಂ ಕುಡುಗೆಮಗೆ ಮಹೋತ್ಸಾಹಮಂ
ನೇಮಿನಾಥಂ ॥ ೨ ॥

ವಿಮಳಜ್ಞಾನಾಳಿನಾಳಂ ಸುಖಮಯ ಮಕರಂದಾಕರಂ ಮುಕ್ತಪಾಪ
ಭ್ರಮರಂ ಸಂಸಕ್ತ ಸೂಕ್ಷ್ಮೋಜ್ವಲ ಗುಣಮವಗಾಹಾವಹಂ ಭದ್ರಮುಸ್ನಿ ।
ದ್ರಮಪಾರಂ ಪಾವನಪ್ರಸ್ತುತಗತಿ ಭುವನಾಗ್ರಸ್ಥಿತಂ ತೋರ್ಕೆ ನಿಚ್ಚಂ
ನಮಗಿಂತತ್ಯಂತ ಲಕ್ಷ್ಮೀಲಲಿತಲಪನಮಂ ಸಿದ್ಧನೀರೇಜಷಂಡಂ ॥ ೩ ॥

ಆಚಾರಂ ನಿಸದಾಗಿ ಸದ್ಗುಣಗಣಂ ಮುಂತಾಗಿ ಮಂತ್ರಕ್ರಿಯಾ
ಳೋಚಂ ನಿರ್ವ್ಯಭಿಚಾರವಾಗೆ ಜಿನರಾಜಪ್ರಾಜ್ಯ ಸಾಮ್ರಾಜ್ಯದೊಳ್ ।
ಶೌಚವ್ಯೋಚಿತಭಾಗ್ಯಲಕ್ಷ್ಮಿ ತಮಗೇಕಚ್ಛತ್ರಮಾಯ್ತೆಂದುಮೆಂ
ಬಾಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ ॥ ೪ ॥

ಪುಸಿಯಂ ಪೊರ್ದದಿರಾರ್ತಮಂ ಬಿಸುಡು ಸಂಸಾರಕ್ಕೆ ಪೇಸೊಳ್ಪನ
ರ್ಚಿಸು ನೀಂ ದರ್ಶನಶುದ್ಧನಾಗು ದುರಘವ್ಯೂಹಕ್ಕೆ ಬೋಧಾಸಿಯಂ ।
ಮಸೆ ಲೇಸಾಗಿ ದಯಾತರಂಗಿಣಿಯೊಳೋಲಾಡೆಂದುಪಾಧ್ಯಾಯರೋ
ದಿಸಿ ಕೈಗನ್ನಡಿಯಂದದಿಂ ಬೆಳಗುಗಂದಂದಿಂಗೆ ಮಚ್ಚಿತ್ತಮಂ ॥ ೫ ॥

ಶ್ರೋತ್ರಂಗಳ್ ಪರಮಾಗಮಕ್ಕೆ ಮತಿ ಸಮ್ಯಗ್ದರ್ಶನ ಜ್ಞಾನ ಚಾ
ರಿತ್ರಂಗಳ್ಗೆ ದಯಾವಲೋಕನೆಗೆ ಕಣ್ಗಳ್ ಮಾಱುವೋದಂತೆ ಚಿ ।

ನ್ಮಾತ್ರಕ್ಕಂ ಪರಭಾವದೊಳ್ಪೊಱೆಯದಿರ್ಪೇಕಾಂತ ಶಾಂತಂ ಕ್ಷಮಾ
ಪಾತ್ರಂ ಸಾಧುಸುಧಾಂಶುವಂಶಮೆಮಗೀಗತ್ಯಂತ ಸಂಶುದ್ಧಿಯಂ ॥ ೬ ॥
ಆಯತಿಯಂ ಸಿಮಿರ್ಚುವರುಹಂತರ ಕೇವಲಬುದ್ಧಿ ಸಿದ್ಧರಾ
ದಾಯತಬೋಧಸಿದ್ಧಿ ವರಸೂರಿಗಳುತ್ತಮವೃತ್ತಿ ಸಂದುಪಾ ।
ಧ್ಯಾಯರ ಪಾವನಪ್ರತಿಭೆ ಸಾಧುಗಳಿರ್ದ ವಿಶುದ್ಧದರ್ಶನಾ
ಮ್ನಾಯಮತಿಪ್ರಕರ್ಷಮೆಮಗೀಗೆ ಸಮಸ್ತಮತಿಪ್ರಕಾಶಮಂ ॥ ೭ ॥

## ೮. ಅಗ್ಗಳನ ಚಂದ್ರಪ್ರಭ ಪುರಾಣದಿಂದ
(ಕ್ರಿ. ಶ. ೧೧೮೯)

ಶ್ರೀಪಾದದ್ವಿತಯಪ್ರದಕ್ಷಿಣಕೃತಿ ವ್ಯಾಸಕ್ತಗೀರ್ವಾಣಕಾಂ
ತಾಪಾಂಗಪ್ರತಿಬಿಂಬಕೋಟಿಘಟಿತ ಸ್ಮೇರಸ್ಥಳೀಂದೀವರ ।
ಶ್ರೀಪೂರ್ಣಂ ಹಿಮವನ್ನಗೇಂದ್ರಮೆನೆ ಕಣ್ಗಿಂಬಾದ ಚಾಂದ್ರಪ್ರಭಂ
ರೂಪಂ ದಿವ್ಯವಚೋಮರುನ್ನದಿಯಿನೆಮ್ಮೊಳ್ ಮಾಳ್ಕೆ ನೈರ್ಮಲ್ಯಮಂ ॥ ೧ ॥

ಆವೃತ ಘಾತ್ಯಘಾತಿದುರಿತಾತ್ಯಯದೊಳ್ ಚರಮಾಂಗಮಾತ್ರಕರ್
ಜೀವಘನಸ್ವರೂಪಮೊಗೆತರ್ಪುದುಮಷ್ಟಮಭೂಮಿವಿಷ್ಟರ ।
ಸ್ತಾವಧಿಸೌಖ್ಯಮುಖ್ಯರುಪಶಿಷ್ಟ ಗುಣಾಷ್ಟಕರಾದನಷ್ಟರ
ಶ್ರೀವನಿತೇಶರೀಗೆಮಗೆ ಸಿದ್ಧರತೀಂದ್ರಿಯಸೌಖ್ಯಸಿದ್ಧಿಯಂ ॥ ೨ ॥

ಧೈರ್ಯಂ ಘೋರತಪಃ ಪರೀಷಹಸಮೂಹಪ್ರಾಪ್ತಿಯೊಳ್ ಸಂದ ತಾ
ತ್ಪರ್ಯಂ ಪಂಚವಿಧಾಮಳಾಚರಣ ಷಟ್ತ್ರಿಂಶದ್ಗುಣಶ್ರೇಣಿಯೊಳ್ ।
ಕಾರ್ಯಂ ಶಿಷ್ಯವಿನೇಯಶಿಕ್ಷೆಯೊಳೊಡಂಬಟ್ಟೊಪ್ಪೆ ಸಂಶೋಭಿಪಾ
ಚಾರ್ಯರ್ ತಾಮೆಮಗೀಗೆ ಸಪ್ತಪರಮಸ್ಥಾನೋದಯೋಪಾಯಮಂ ॥ ೩ ॥

ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿಪ್ರತಿಜ್ಞಾ
ಜಯಮಂ ತದ್ವಿಜ್ಞರೊಳ್ ಮುಂ ಬಱಿಕೆ ತಿಳಿಪಿ ಭವ್ಯರ್ಗೆ ಸದ್ಧರ್ಮಕರ್ಮಾ ।
ಶ್ರಯತತ್ತ್ವಾತತ್ತ್ವಭೇದಂಗಳನೊಡರಿಸಿ ವಾಕ್ಛ್ರೀ ಯಶಶ್ಶ್ರೀಸಮಾಕೃ
ಷ್ಟಿಯನಾದಂ ಸಂದರಂತರ್ಮುಖತೆಗಭಿಮುಖಂ ಮಾಳ್ಕುಪಾಧ್ಯಾಯರೆಮ್ಮಂ ॥ ೪ ॥

ಶೀಲಂ ಪಾಲಿತಷಟ್ಪ್ರಕಾರಮೆನಿಸಿರ್ದಾವಶ್ಯಕಕ್ಕಾಯ್ತು ನಿ
ತ್ಯಾಲಂಬಂ ನಿರವದ್ಯಮಾಯ್ತು ಚರಿತಂ ಸಾವದ್ಯಮುಂ ಪೊರ್ದದೆಂ ।
ದೀಲೋಕಂ ಪೊಗೞ್ವಪ್ರಮತ್ತಗುಣಸಂಸ್ಥಾನಕ್ಕೆ ಪಕ್ಕಾದ ಬೋ
ಧಾಲೋಕರ್ ದಯೆಗೆಯ್ಗೆ ಸಾಧುಗಳಘ ಪ್ರಧ್ವಂಸನಪ್ರಾರ್ಥಿಯಂ ॥ ೫ ॥

ಪರಿಹೃತದೋಷಂ ಸಗುಣಂ
ಪರಾರ್ಥ್ಯಮುತ್ಪ್ರಭಮತರ್ಕ್ಯ ಸಾಮರ್ಥ್ಯಮೞಂ ।
ಕರಿಸಿರ್ಕೆ ಪಂಚಗುರು ಪಂ
ಚರತ್ನಮಾಳಿಕೆ ಮದೀಯಮತಿನಾಸಿಸಿಯಂ ॥ ೬ ॥

## ೮. ಜನ್ನನ ಅನಂತನಾಥ ಪುರಾಣದಿಂದ
### (ಕ್ರಿ. ಶ. ೧೨೦೯)

ಶ್ರೀಮದನಂತ ಬೋಧದಿನನಂತ ವಿಲೋಕನದಿಂದನಂತ ಸೌ
ಖ್ಯಾಮೃತದಿಂದನಂತ ಬಲದಿಂ ತನಗಾದುದನಂತ ನಾಮಮು ।
ದ್ದಾಮದನಂತ ಕರ್ಮಜಯದಿಂದೊರೆವೆತ್ತುದು ಮತ್ತನಂತಜಿ
ನ್ನಾಮನೆನಿಪ್ಪನೀಗೆಮಗನಂತಜಿನೇಂದ್ರನನಂತಸೌಖ್ಯಮಂ ॥ ೧ ॥

ಸಿದ್ಧರ್ ನಿಷ್ಪನ್ನಸೌಖ್ಯೋದಯದ ಮಹಿಮೆಯಿಂ ಸಂದ ನಿತ್ಯತ್ವದಿಂದಂ
ಸಿದ್ಧರ್ ಲೋಕಾಗ್ರದೊಳ್ ನಿಚ್ಚಳನಿವಸನರಾಗಿರ್ದ ವಿಖ್ಯಾತಿಯಿಂದಂ ।
ಸಿದ್ಧರ್ ತಾವಾದಮೂರ್ತರ್ ಚರಮತನುಸಮರ್ ನಿರ್ಗುಣರ್ ಸದ್ಗುಣರ್ ಸಂ
ಶುದ್ಧರ್ ಸಿದ್ಧರ್ ನಿತಾಂತಂ ನಿಲಿಸುಗೆ ನಿಜನಿಶ್ಶ್ರೇಯಸ ಶ್ರೀಯೊಳೆಮ್ಮಂ ॥ ೨ ॥

ರೋಚಿರ್ಮಾಳೆಗಳಂತೆ ತಳ್ತಿಸೆಯೆ ಷಟ್ತ್ರಿಂಶದ್ಗುಣಂ ಕೂಡೆ ಪಂ
ಚಾಚಾರಾಚರಣಂ ದಿಗಂಬರವಿಳಾಸೋದ್ಭಾಸಮುಂ ಬೋಧಲ ।
ಕ್ಷ್ಮೀಚಾತುರ್ಮುಖಬಿಂಬದಿಂ ಪರಮಧರ್ಮಾಂಭೋಜಿನೀ ಸೂರ್ಯರಾ
ದಾಚಾರ್ಯರ್ ದಯೆಯಿಂ ಕಟಿಲ್ಚುಗೆ ಮದೀಯ ಸ್ವಾಂತದಿಂ ಧ್ವಾಂತಮಂ ॥ ೩ ॥

ನ್ಯಾಯಜ್ಯೋತಿಯನಿಕ್ಕಿ ಮೆಟ್ಟಿ ಕುಮತಧ್ವಾಂತಂಗಳಂ ಮುಕ್ತಿಪಾ
ಥೇಯಂ ನಿರ್ಮಳ ಧರ್ಮವೆಂಬ ನುಡಿ ಭವ್ಯರ್ಗಪ್ಪಿನಂ ತೋರ್ಪುಪಾ ।
ಧ್ಯಾಯರ್ಗಾನತನಪ್ಪೆನೀಗೆನಗುಪಾದೇಯಂ ಪರಬ್ರಹ್ಮಮಿಂ
ಹೇಯಂ ಕಾಯಸಮೇತವಸ್ತುವೆನಿಪೀ ನಿಶ್ರೇಯಸೋಪಾಯಮಂ ॥ ೪ ॥

ಪರಮದಯಾಗುಣಂ ನಯನದೊಳ್ ದೊರೆವೆತ್ತನುಕಂಪೆ ಕಾಯದೊಳ್
ಗುರುವಿನಯಂ ಗುಣಾಧಿಕದೊಳುದ್ಧತಭಾವನೆ ತತ್ತ್ವವೃತ್ತಿಯೊಳ್ ।
ಚರಿತಮುದಾತ್ತ ಷಟ್ಕ್ರಿಯೆಗಳೊಳ್ ಧೃತಮೌನತೆ ಲೋಕವಾರ್ತೆಯೊಳ್
ದೊರೆವಡೆದೊಪ್ಪೆ ಸಂದರೆಮಗೀಗಳೀವಂ ಸಲೆ ಸರ್ವಸಾಧುಗಳ್ ॥ ೫ ॥

ಆ ಪರಮಶ್ರೀದೃಷ್ಟಿಕ
ಳಾಪಮನೆಱಗಿಸುವ ಸಂಪದಕ್ಕೆಮಗದೆ ದಲ್ ।
ರೂಪರ್ಹತ್ಸಿದ್ಧಾಚಾ
ರ್ಯೋಪಾಧ್ಯಾಯಾಖ್ಯಸರ್ವಸಾಧುಸ್ತವನಂ ॥ ೬ ॥

## ೧೦. ಗುಣವರ್ಮನ ಪುಷ್ಪದಂತ ಪುರಾಣದಿಂದ

(ಕ್ರಿ. ಶ. ಸು. ೧೨೩೫)

ಶ್ರೀಪಾಲೋವೀಶಭೂಭೃತ್ಸಮುದಯವಿನುತಂಗಳ್ ತಮಸ್ತೋಮಚೈತ್ರಾ
ದೀಪಂಗಳ್ ದರ್ಶಿತಾಶಾಂಬರಸಕಲಪದಾರ್ಥಕ್ರಮಂಗಳ್ ಸದಾಲೋ ।
ಕಾಪದ್ವಿಚ್ಛೇದಕಂಗಳ್ ಮಹದಮೃತನಿಧಿಸ್ಫೂರ್ತಿಗಳ್ ಪುಷ್ಪದಂತ
ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ ॥ ೧ ॥

ಅನಿಶಂ ಸ್ವಾತ್ಮಗುಣಪ್ರಬುದ್ಧರೆನಿಸಿರ್ದುಂ ಮುಕ್ತರಾದಂ ನಿರಂ
ಜನರಾಗಿರ್ದುಮಶೇಷ ಲೋಕನಿಹಿತಾರ್ಥಗ್ರಾಹಿಗಳ್ ಯೋಗವ ।
ರ್ತನಮೊಂದುಂ ತಮಗೆಂದುಮಿಲ್ಲೆನಿಸಿಯುಂ ಸಿದ್ಧರ್ಕಳೆಂದೆಂಬ ಪೆಂ
ಪಿನಮೂರ್ತರ್ ಪರಮಾತ್ಮರುದ್ಧರಿಸುಗೆಮ್ಮಂ ಸಿದ್ಧಿಯಪ್ಪನ್ನೆಗಂ ॥ ೨ ॥

ವರಪಂಚಾಚಾರಮಾಚಾರವನೊದವಿಸೆ ಷಟ್ತ್ರಿಂಶ [ದುದ್ಯ]
ದ್ಗುಣಂ ಬಿ
ತ್ತರದಿಂದಂ ಸದ್ಗುಣವ್ರಾತದೊಳನುವಿಸೆ ಸಮ್ಯಕ್ತಪಃ ಶೀಲಜಾಲಂ ।
ಪೊರೆದಂತೇವಾಸಿ ಭವ್ಯಾವಳಿಗತುಳತಪಃಶೀಲಮಂ ಮಾಡೆ
ಲೋಕೋ
ತ್ತರರಾದಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿ
ಯಿಂದಂ ॥ ೩ ॥

ನಯವಾದಂ ನಯಮಾಗಿ ಕೂಡೆ ಪೊಳೆಯಲ್ ನಿಕ್ಷೇಪ
ವ್ಯಾಕ್ಷೇಪಮಾ
ರಯಮಿಲ್ಲೆಂದೆನಿಸಲ್ ಪ್ರಮಾಣಗದಿತಾರ್ಥಂ ಸಂಶಯಂಗೊಳ್ಳ
ವಾ ।
ದಿಯೊಳುಂಟಾಗೆ ಲಸತ್ಪ್ರಮಾಣಮತಿಯುಂ ರತ್ನತ್ರಯಂ ಮುಕ್ತ್ಯಲಂ
ಕ್ರಿಯೆಯಾಗಲ್ ಮಿಗೆ ಪೇಳ್ವರೀಗೆಮಗುಪಾಧ್ಯಾಯರ್
ಸುಖೋಪಾಯಮಂ ॥ ೪ ॥

ಬಗೆ ತತ್ತ್ವಾರ್ಥವಿನಿಶ್ಚಯಂಬಡೆಯೆ ನೈರ್ಗ್ರಂಥ್ಯ
ಪೊದಟ್ಟಿತ್ತು ಶಾಂ
ತಿಗಡರ್ಪಾಗಿರಲುಗ್ರಕರ್ಮರಿಪುವಂ ನಿರ್ಮೂಲನಂ ಮಾಡುವು ।
ಜ್ಜುಗಮಾಯ್ತೊಂದಿರಲಪ್ರಮತ್ತತೆಯೊಳನ್ಯ ಪ್ರೀತಿಶೀಲಕ್ಕೆ ಕೇ
ಡೊಗೆದತ್ತೆಂಬ ವಿರುದ್ಧವೃತ್ತರೆಮಗೊಳ್ಪಂ ಮಾಳ್ಕೆ
ಸಾಧೂತ್ತಮರ್ ॥ ೫ ॥

ಎಮಗೀಗೆ ಪಂಚಗುರುಪದ
ಕಮಲಂಗಳ್ ಕಡೆಯದೊಂದೆ ಕಲ್ಯಾಣಮನೇ ।
ವೆಮೊ ಮಿಕ್ಕಾ ನಾಲ್ಕುಮವನಿ
ಗೆ ಮಾಣ್ಗೆ ತಾಂ ಮೇಣಿದೊಂದೆ ಮುಖ್ಯಪ್ರಕೃತಂ ॥ ೬ ॥

## ೧೧. ಕಮಲಭವನ ಶಾಂತೀಶ್ವರ ಪುರಾಣದಿಂದ
### (ಕ್ರಿ. ಶ. ಸು. ೧೨೩೫)

ಶ್ರೀಮಚ್ಚಕ್ರಾಳಿಚಕ್ರೋತ್ಸವಕರನಮರೀ ವೃಂದನೇತ್ರಾರವಿಂದ
ಸ್ತೋಮಾನಂದಪ್ರದಂ ಸಂಸೃತಿತಿಮಿರಹರಂ ತ್ಯಕ್ತದೋಷಂ ವಿಶುದ್ಧೋ ।
ದ್ಧಾಮಂ ತಾನಪ್ಪನೂನಾಮಲರುಚಿಯುತ ಬಾಲಾತಪೋದ್ಭಾಸಿ ನಿಚ್ಚಂ
ಪ್ರೇಮಂಬೆತ್ತಿಮ್ಮ ಚೇತೋಂಬರಮನೆ ಬೆಳಗುತ್ತಿರ್ಕೆ ಶಾಂತೀಶ್ವರಾರ್ಕಂ ॥ ೧ ॥

ಪರಿಪಿಷ್ಟ ಸ್ಪಷ್ಟಕರ್ಮಾಷ್ಟಕಮಲದಳದಿಂ ಕೆಳ್ಪುಗಳ್ ಪೋೞ್ದುವಾದಂ
ಚರಮಾಂಗವ್ಯಕ್ತಿಯಿಂದೊಯ್ಯನೆ ತನುತೆಗೆ ಪಕ್ಕಾಗಿ ಜೀವಸ್ವರೂಪಂ ।
ಪರಿಸಂಬೆತ್ತೊಪ್ಪೆ ಲೋಕಾಗ್ರದೊಳಮೃತರಮಾಸಂಗ ಸಂಭೂತಸೌಖ್ಯಾ
ಕರಮಂ ತಾಳ್ದಿರ್ದವರ್ಕಳ್ ಕುಡುಗೆ ನಮಗೆ ನಿಶ್ರೇಯಸಶ್ರೀಯ ಸೈಪಂ ॥ ೨ ॥

ಪ್ರಾಚುರ್ಯಾತಿಶಯಂ ಪೊದೞ್ದಮಳ ಷಟ್ತ್ರಿಂಶದ್ಗುಣಶ್ರೇಣಿ ಪಂ
ಚಾಚಾರಂ ಸುತಪಃ ಪರೀಷಹಜಯಂ ಶಿಷ್ಯಾದಿಭವ್ಯಾಘ ಶಿ ।
ಕ್ಷಾಚಾತುರ್ಯಮುದಗ್ರಮಾದನುಪಮರ್ ಸಪ್ತರ್ಧಿಸಂಪನ್ನರ
ಪ್ಪಾಚಾರ್ಯರ್ ನಮಗೀಗೆ ನಿರ್ಮಳತೆವೆತ್ತಾಚಾರಸಂಪತ್ತಿಯಂ ॥ ೩ ॥

ವಿಳಸನ್ನಿರ್ಮಳ ಧರ್ಮಕರ್ಮಮಯ ತತ್ತ್ವಾತತ್ತ್ವಭೇದಂಗಳಂ
ತಿಳಿಪುತ್ತಿರ್ಪ ವಿನೇಯಸಂತತಿಗನೇಕಾಂತಪ್ರತಿಜ್ಞಾಯುತಂ ।
ಗಳನಾತ್ಮೀಯಜನಕ್ಕೆ ಪೇೞ್ದು ನಯನಿಕ್ಷೇಪಪ್ರಮಾಣೋಕ್ತಿ ಸಂ
ಕುಳಶಾಚಾಯತರೊಲ್ದು ಮಾೞ್ಕೆಮಗುಪಾಧ್ಯಾಯರ್
ಸುಖೋಪಾಯಮಂ ॥ ೪ ॥

ಅಗಣಿತರಪ್ರಮತ್ತ ಗುಣಭೂಷಣಭಾಸುರರೊಪ್ಪುವೆತ್ತ ಶಾಂ
ತಿಗೆ ನೆಲೆಯಾದ ನಿರ್ಮಳಮನಸ್ವಿಗಳೊಪ್ಪುವಗಾಧಬೋಧದ್ಯ ।
ಸ್ವಿಗಳನವದ್ಯಹೃದ್ಯಚರಿತರ್ ಜಿತಮನ್ಮಥಶೌರ್ಯರಪ್ಪ ಸಾ
ಧುಗಳ ಪದಂಗಳೀಗೆಮಗೆ ಸಾಧುಪದೋನ್ನತಿಯಂ ನಿರಂತರಂ ॥ ೫ ॥

ಮಳರಹಿತಪಂಚಗುರುಗಳ
ವಿಳಸಿತಮೆನಿಸಿರ್ಪ ಪಂಚಪದಸಂಚಯನಿ ।
ರ್ಮಳಿನ ಮಣಿದೀಪಕಳಿಕಾ
ವಳಿ ಬೆಳಗುತ್ತಿರ್ಕೆ ಮನ್ಮನೋಮಂದಿರಮಂ ॥ ೬ ॥

## ೧೨. ಮಧುರನ ಧರ್ಮನಾಥ ಪುರಾಣದಿಂದ

(ಕ್ರಿ. ಶ. ಸು. ೧೩೮೫)

ಶ್ರೀಭಾಸ್ವದ್ಬಿಂಬಮೆಂಬಂತುದಯಿಸಿ ದಶಧರ್ಮಕ್ಕಡರ್ಪಾದ ತೇಜೋ
ಭಾಭಾಸ್ವದ್ಧರ್ಮಚಕ್ರಂ ಸಮನಿಸೆ ಸುಮನೋಧರ್ಮನಂ ಧರ್ಮನಂ ಧಾ ।
ತ್ರೀಭಾಗಂ ಜಾನೆಲನಲ್ ಜಾೞಿಸಿ ಚತುರತೆಯಿಂ ಗೆಲ್ದು ಕೈವಲ್ಯಲಕ್ಷ್ಮೀ
ಲಾಭಾಯುಕ್ತಾತ್ಮಧರ್ಮಂ ಸಲಹುಗೆ ಸಲೆ ಸದ್ಧರ್ಮನುಂ
ಧರ್ಮನಾಥಂ ॥ ೧ ॥

ಕಲುಷಂಗಳ್ ಪಿಂಗಿರಲ್ ಕಾೞಿಕೆಗೞೆದ ಸುವರ್ಣಂಬೊಲಿಂಬಿಂದ ನಿತ್ಯೋ
ಜ್ಜ್ವಲಚೈತನ್ಯಂ ನಿಜಾಕಾರದಿನೆಸೆವ ನಿರಾಕಾರನಾತ್ಯಂತಿಕ ಶ್ರೀ ।
ಲಲನಾಲೀಲಾವತಂಸಂ ಸಮುಪಕಳಿತ ಕೈವಲ್ಯಮಾಂಗಲ್ಯಮೆಮ್ಮೊಳ್
ನೆಲೆಗೊಳ್ಗೀರಂದದಿಂ ತೀರದ ಶಿವಸುಖಮಂ ಸಾರ್ದ ಸಿದ್ಧಸ್ವರೂಪರ್ ॥ ೨ ॥

ಸೂಚೀನಿರ್ಭೇದಮಾಗಿರ್ದಗಣಿತಭವಮಿಥ್ಯಾತ್ವಮಂ ತೂಳ್ದು ಸಂದೈ
ದಾಚಾರಂ ಸದ್ಗುಣಂಗಳ್ ತಮಗಮರ್ದಿರೆ ಭವ್ಯಾೞಿಗವ್ಯಾಜದಿಂ ಶಿ ।
ಕ್ಷಾಚಾತುರ್ಯೋಕ್ತಿಯಿಂ ಕೆಯ್ಕೊಳಿಸಿ ಜಿನಮತಸ್ಫೂರ್ತಿಯೊಳ್ ಕೀರ್ತಿವೆತ್ತಿ
ರ್ದಾಚಾರ್ಯರ್ ಸಮ್ಯಗಾಚಾರಮನೊದವಿಸುಗೆಮ್ಮೊಳ್ ಮನಃ
ಪ್ರೀತಿಯಿಂದಂ ॥ ೩ ॥

ಮಧ್ಯಸ್ಥೀಭಾವದಿಂ ಮಚ್ಚರಮನುೞಿದು ಕೇಳ್ವಂದದಿಂ ಸರ್ವಲೋಕಾ
ರಾಧ್ಯಂ ಸಿದ್ಧಂ ವಿಶುದ್ಧಂ ಜಿನಮತಮೆನಿಪ್ಪೊಂದಂದಮಂ ಕೂರ್ಮೆಯಿಂ ಧ ।
ರ್ಮಧ್ಯಾನಂ ಸಲ್ವವೋಲ್ ಚೆಲ್ವಳವಡೆ ನಿಜಶಿಷ್ಯರ್ಗೆ ಮುಂಪೇೞ್ದು ಜೈನೋ
ಪಾಧ್ಯಾಯರ್ ಪ್ರೌಢಿಯಿಂ ಜೋಡಿಸುಗೆಮಗನವದ್ಯ ಶ್ರುತಶ್ರೀಯು
ಕೂರ್ಪಂ ॥ ೪ ॥

ನೆಗೞ್ದುದ್ದಂಡದ ಪುಷ್ಪಕಾಂಡನಲರಂಬಂ ನೆಗ್ಗಿ ಕೋದಂಡಮಂ
ತೆಗೆದಾರ್ತಿಂ ಮುಱಿದಿಕ್ಕಿ ಗಾಢಗುಣದಿಂದಂ ಕೋಳ್ಗಳಂ ಕಟ್ಟಿ ರ ।
ಚ್ಚೆಗೆ ತಂದುಬ್ಬಟೆಯಿಂದೆ ದೂಱುವಡೆದಿರ್ದಂ ಮತ್ತಿನರ್ ಸರ್ವಸಾ
ಧುಗಳೆಂತಾದರೆನಿಪ್ಪವರ್ ಕಿಡಿಸುಗೆಮ್ಮೀನೋವಿಕಾರಂಗಳಂ ॥ ೫ ॥

ಗುರುಪದಮೆಮಗರ್ಹತ್ಪದ
ಮುರು ಸಿದ್ಧಪದಂ ಪ್ರಸಿದ್ಧಿದಾಚಾರ್ಯಪದಂ ।
ಪರಮೋಪಾಧ್ಯಾಯಪದಂ
ವರಸಾಧುಪದಂ ಪದಂಗಳೊಳ್ ಮಂಗಳದಂ ॥ ೬ ॥

ಗುಜ್ಜುಗುರುಕಿಲ್ಲದೆನಸುಂ
ಪಜ್ಜಳಿಸಿರೆ ದಿಟ್ಟಿ ಸಿಷ್ಟೆಯಿಂ ಮುಕ್ತಿಪದ ।
ಕ್ಕುಜ್ಜುಗಿಸಿ ಪಂಚಗುರುಗಳ
ಪಜ್ಜೆಗಳಂ ಪಿಡಿದು ನಡೆದವಂಗರಿದುಂಟೇ ॥ ೭ ॥

### ೧೨. ಪಂಪನ ಆದಿಪುರಾಣದಿಂದ (ಕ್ರಿ. ಶ. ೯೪೧)

ತ್ರಿದಶೇಂದ್ರಮೌಳಿಮಣಿಶೋ
ಣದೀಪ್ತಿಗಳ್ ಪುದಿದು ಪೊಳೆವಲಕ್ತಕರಸದಿಂ ।
ಪುದಿದಂತೊಪ್ಪಿರ್ಪರ್ಹ
ತ್ಪದಂಗಳೆಮಗೀಗೆ ತಡೆಯದರ್ಹತ್ಪದಮಂ ॥ ೧ ॥

ಭುವನೇಶ್ವರ ನಿಜರೂಪ
ಸ್ತವ ವಸ್ತುಸ್ತವ ಗುಣಸ್ತವಂಗನವಱಿಂ ।
ತುವರಂ ಬಣ್ಣಿಸಲಮರೇಂ
ದ್ರವಾಸುಕಿಪ್ರಭುಗಳಾರ್ತರಿಲ್ಲೆನ್ನಳವೇ ॥ ೨ ॥

ಅಳತೆಗೆ ತೂಕಕ್ಕೆಣಿಕೆಗೆ
ಮೊಳಗಾದುವು ಸಕಳವಸ್ತುಗಳ್ ಭುವನಜನ ।
ಕ್ಕಳೆಯಲ್ ತೂಗಲ್ಕೆಣಿಸ
ಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ ॥ ೩ ॥

ತನ್ನಿರ್ದೆಡೆಯದೆ ಮೇರುವಿ
ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ ।
ನಿನ್ನ ಗುಣೋನ್ನತಿ ಸಕಳ ಜ
ಗನ್ನುತ ಭುವನಾಂತರಾಳಮಂ ಪರ್ಬಿರ್ಕುಂ ॥ ೪ ॥

ಆಕುಳನೆನಾಗಿ ಸುೞಿದೆನ
ನಾಕುಳಮಪ್ಪೆಡೆಯನಱಿಸಿ ಕಾಣೆಂ ಮೂರುಂ ।
ಲೋಕದೊಳಂ ನಿನ್ನಿರ್ಕೆಯೆ
ಲೋಕಾಗ್ರಮೆ ಸಂತಮದನೆ ಮಾಡೆನಗರ್ಹಾ ॥ ೫ ॥

ಭವನಿಗಳದ ತೊಡರಂ ಕಳೆ
ಭವಜಳಧಿಯ ತಡಿಗೆ ಸಾರ್ಚು ಭವಗಹನದುಪ ।
ದ್ರವಮಂ ಕಿಡಿಸು ಭವಾಂತಕ
ಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ ॥ ೬ ॥

ಮರಣದ ಜನ್ಮದ ನಿಗಳಂ
ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ ।
ಸ್ಮರಿಯಿಪುದನಣೋರಣ್ವಂ
ತರವ್ಯತಿಕ್ರಮಣಮಾತ್ರಮುಂ ಮಱೆದಪೆನೆ ॥ ೭ ॥

ತಿಳಕಂ ವಶ್ಯಮೆ ಜಡಜನ
ಮೊಳಗಱಿಯದು ಸಕಳ ಭವ್ಯತಿಳಕಂಗೆ ಜಗ ।
ತ್ರಿತಿಳಕ ಭವತ್ಪದಚಂದನ
ತಿಳಕಂ ತ್ರೈಲೋಕ್ಯವಶ್ಯಮಕ್ಕುಮವಶ್ಯಂ ॥ ೮ ॥

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಡ್ಪಿಂತು ಬೇಳಲ್ಲೆನು ।
ತ್ರಮದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ ॥ ೯ ॥

ಸಮಸ್ತಸುರಕೋಟಿ ಹೇಮಘಟಕೋಟಿಯಿಂ ತೀವಿ ತಂ
ದಮೇಯ ಭುಜಕೋಟಿಯಿಂ ಮಿಸಿಸೆ ದುಗ್ಧಸಿಂಧುಪ್ಲವಂ ।
ಶ್ರಮಾಂಬುಲವವೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿ
ಲ್ಲಮಾನುಷಮನಂತವೀರ್ಯ ಗುಣಮಾದಿತೀರ್ಥೇಶ್ವರಾ ॥ ೧೦ ॥

ವಿದಗ್ಧಸುರಸೌಂದರೀ ನಯನಸೌಂದರಂ ನಿನ್ನ ರೂ
ಪಿದೆತ್ತ ಕುಸುಮಾಸ್ತ್ರನಂ ತುಳಿದು ಗೆಲ್ಪ ವಿಕ್ರಾಂತಮೆ ।

ತ್ರಿದಚ್ಛರಿದಲೆಂಬಿನಂ ನೆಗಟ್ಟಿ ಸೀಂ ತ್ರಿಲೋಕಂಗಳೊಳ್
ಸ ದೇವಚರಿತಂ ಚರಿತ್ರೆಸಿಸಿದ್ಧೈ ತ್ರಿಲೋಕೇಶ್ವರಾ ॥ ೧೧ ॥

ಅತೀಂದ್ರಿಯಸುಖಾಮೃತಾಂಬುಧಿನಿವಾಸಮೊಂದೊಂದನಾ
ತ್ಮತತ್ತ್ವವಿದ ಮುಕ್ತಿಮಾರ್ಗಮನೆ ಕೀೞ್ ಕಂಡ್ಯೆ ಪೇೞಿರ್ ।
ಚತುರ್ಗತಿಯ ಬಟ್ಟೆಯುಂ ನೆೞಲುಯು ಕಂಡರೆಂತುಂ ಕರ
ಸ್ಥಿತಾಮಳಕಮೆಂಬರಾಜಜಿನದೇವುದಿಂದ್ರಾರ್ಚಿತಾ ॥ ೧೨ ॥

ಮರುಸ್ಥಳದ ಮಾಳದೊಳ್ ನಡುವಗಲ್ವರಂ ಗ್ರೀಷ್ಮದೊಳ್
ಸುರುಳ್ವಿನೆಗಮುೞ್ಕಿ ಬೇವವರ್ಗೆ ಜೋಂಪಪಿಪಾಸಾಮ್ರವು ನಿ ।
ರ್ಝರಾಂಬು ದೊರಕೊಳ್ವವೋಲ್ ಭವದವಾಗ್ನಿಯೊಳ್ ಬೇವ ಜೀ
ವರಾಶಿಗೆ ಭವದ್ವಚೋಮೃತಮ ಮರ್ದನಂಗಾಂತಕಾ ॥ ೧೩ ॥

ಭವಂ ತವೆ ಭವತ್ಪದಾಂಬುರುಹ ಸೇವೆಗೆಯ್ವಾರುಮಂ
ಭವಂಗಿಡಿಪೆಯೆಂ ತ್ರಿಲೋಕಗುರುವೆಂಬ ಪೆಂಪಿಂತುಟೇ ।
ಭವಂಗಿಡಿಸುವೋಲಗಕ್ಕಭವ ಬೇಸರೆಂ ಪೋಗೆ ಪೋ
ಭವಂ ಭವದುಪಾಂತದಲ್ಲಿಯು ಮನೋಭವಧ್ವಂಸಕಾ ॥ ೧೪ ॥

ಜವಂಗಿಡದೆ ಮುಟ್ಟಿಬರ್ಪಜವನಂ ಜವಂಗುಂದಿಸಲ್
ಜವಂಗೆ ಜವನಾಗಲಿಂ ಪೆೞರ್ಗೆ ತೀರ್ಗುಮೇ ತೀರದಾ ।
ಜವಂ ಜವಜವಾಗಿ ಮುಟ್ಟುಗಿಡುವನ್ನವಿನ್ನಾ ಜವಂ
ಜವವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ ॥ ೧೫ ॥

ಅನೇಕಭುಜನೇತ್ರಪಂಕ್ತಿರಸನಾದಿಗಳ್ ದೇವಸಿ
ನ್ನನರ್ಚಿಸುವ ನೋೞ್ಪ ಬಣ್ಣಿಸುವ ಪೊತ್ತದೇಕಾಂಗದಿಂ ।
ದ್ರನಂತೆನಗೆ ಸಾಲವಿನ್ನೆರಡೆ ಕ್ಕೈಯ್ಯೆರಟ್ಕಣ್ಗಳೊಂ
ದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ ॥ ೧೬ ॥

ಫಣಿಪ್ರಭುಗಮೆತ್ತಮತ್ತಳಗಮುತ್ತೆ ರೂಪಸ್ತವಂ
ಗುಣಸ್ತವಮುದಾತ್ತವೃತ್ತ ಭವದೀಯ ವಸ್ತುಸ್ತವಂ ।
ಗುಣಾಗುಣವಿವೇಕಮೂಕರತಿಮೂರ್ಖರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆದವರಾದಿತೀರ್ಥೇಶ್ವರಾ ॥ ೧೭ ॥

ಕಮಳಾಳಂಕೃತಮಪ್ಪ ಹೇಮಕಮಳಂ ಮಾಣಿಕ್ಯಭಟ್ಟಾರಕ
ದ್ಯುಮಣಿದ್ಯೋತಿಯಿನೊಯ್ಯನುಳ್ಳಲರ್ದಪ್ರೊಲ್ ಚೆಲ್ವಿಂಬಿನಂ ಭವ್ಯಹೃ ।
ತ್ಕಮಳಕ್ಕಂ ಮುದಮಂ ಜಪಾಪ್ರಸವರಕ್ತಾಶೋಕಬಂಧೂಕಶೋ
ಣಮಣಿ ಜ್ಯೋತಿಗಳೆಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ॥ ೧೮ ॥

ಕಣಿ ರತ್ನತ್ರಿತಯಕ್ಕಿದೇಂ ಪಿರಿದೆನಲ್ ರತ್ನಾಕರಂ ರತ್ನತೋ
ರಣ ರತ್ನಾಸನರತ್ನವಿಭ್ರಮಣಿ ರತ್ನಾಶೋಕ ರತ್ನಪ್ರಭಾ ।
ಮಣಿ ರತ್ನಾತಪವಾರಣ ತ್ರಿತಯದಿಂ ತ್ರೈಲೋಕ್ಯಸಾಮ್ರಾಜ್ಯಭೂ
ಷಣಮಾಣಿಕ್ಯಜಿನೇಂದ್ರಬಿಂಬಮು ಜಯಂ ಭದ್ರಂ ಶುಭಂ ಮಂಗಳಂ ॥ ೧೯ ॥

ಪರಿಪೂರ್ಣೋಜ್ವಲ ಚಂದ್ರಬಿಂಬರುಚಿಯಿಂ ಚಂದ್ರಪ್ರಭಾಪುಷ್ಪದಂ
ತರೆನಲ್ ಗಾರುಡನೀಲಶೋಣಮಣಿಹೇಮಚ್ಛಾಯೆಯಿಂದಿರ್ಪತಿ ।
ರ್ಬರೆನಲ್ ಸಂದೊಡಮೇಕರೂಪಮು ಜಗಕ್ಕಾಶ್ಚರ್ಯಮಂ ಪುಟ್ಟಿಸು
ತ್ತಿರೆ ಮಾಣಿಕ್ಯಜಿನೇಂದ್ರಬಿಂಬಮು ಜಯಂ ಭದ್ರ ಶುಭಂ ಮಂಗಳಂ ॥ ೨೦ ॥

ಸ್ಫುರಿತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿ
ಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ತಮೋ ।
ಹರನಾಗಿರ್ದಜಂ ಹರಂ ಭವಹರಂ ಮಾಣಿಕ್ಯದೇವಂ ವಸುಂ
ಧರೆಗಿಂತೋರ್ಪನೆ ದೇವನಾಗಿರೆ ಜಯಂ ಭದ್ರಂ ಶುಭಂ ಮಂಗಳಂ ॥ ೨೧ ॥

ವಿಪಿನೋಲ್ಲಂಘನ ಸಿಂಧುಯಾನ ನಗಕೂಟಾರೋಹಣಕ್ಲೇಶ ಮಂ
ತ್ರಪದಧ್ಯಾನ ಬಿಳಪ್ರವೇಶರಸವಾದಾಯಾಸದೊಳ್ ಬಾರ್ತೆ ತೀ ।
ರ್ದಪುದೇ ಪೊರ್ದಲೊಡಂ ವಿನೇಯಜನಸಂಘಾತಕ್ಕೆ ಮಾಣಿಕ್ಯದೇ
ವಪದಾಂಭೋಜ ವರಪ್ರಸಾದಮು ಜಯಂ ಭದ್ರಂ ಶುಭಂ ಮಂಗಳಂ॥ ೨೨ ॥

ಸಕಳಕ್ಷ್ಮಾಪ್ರಚರಪೀಚರಾಂಚಿತ ಮಹಾಮಾಣಿಕ್ಯ ಗಾಣಿಕ್ಯ ಹಾ
ಸ್ತಿಕರತ್ನೋರ್ಜಿತ ಚಕ್ರವರ್ತಿವಿಭವಂ ಮುನ್ನಂ ಬಜೀಕ್ಕೆಂದ್ರಮ್ಮೈ ।
ಹಿಕಪಾರತ್ರಿಕಭೋಗಮುಂ ಕುಡುವಿನಂ ಮಾಣಿಕ್ಯಭಟ್ಟಾರಕಾಂ
ತಿಕಮಂ ಸಾರೆ ವಿನೇಯರಾಜಿಗೆ ಜಯಂ ಭದ್ರಂ ಶುಭಂ ಮಂಗಳಂ ॥ ೨೩ ॥

ಕುಪಿತಾನೇಕಪ ದಂದಶೂಕ ದವ ದೈತ್ಯಾರಾತಿ ಚೋರಾಂಧಕಾ
ರ ಪತದ್ವಜ್ರ ವಿಷಾಭಿಚಾರಿಕ ಜರಾತಂಕಾದಿಭೇದಂಗಳ ।

ಪ್ಪುಪಸರ್ಗಂಗಳ ಸೋವನಾವೆಡೆಯೊಳಂ ಕೈಗಾವ ಮಾಣಿಕ್ಯದೇ
ವಪದಾಂಭೋಜಮೆ ಭವ್ಯಕೋಟಿಗೆ ಜಯಂ.ಭದ್ರಂ ಶುಭಂ ಮಂಗಳಂ ॥ ೨೪ ॥

ಸಿತದೂರ್ವಾಂಕುರ ಮಾತುಲುಂಗ ನಳಿನೀ ಭೃಂಗಾರ ಗೋರೋಚನಾ
ಕ್ಷತ ದಧ್ಯಾದಿವಿಡಂಬಮಂಗಳದೊಳೇಂ ಸಂಸಾರಮಂ ದಾಂಟುವೂ ।
ರ್ಜಿತಪುಣ್ಯಂಗಪವರ್ಗಲಕ್ಷ್ಮಿವರೆಗಂ ಸಂಸಾರಸಾರೋದಯೋ
ದಿತಮಾಣಿಕ್ಯಜಿನಸ್ತವಾವಳಿ ಜಯಂ ಭದ್ರಂ ಶುಭಂ ಮಂಗಳಂ ॥ ೨೫ ॥

## ೧೪. ರನ್ನನ ಅಜಿತಪುರಾಣದಿಂದ (ಕ್ರಿ. ಶ. ೯೯೩)

ಶ್ರೀಸಮವಸರಣಲಕ್ಷ್ಮೀ
ಭಾಸುರನಮರಾಸುರಾರ್ಚನಾವ್ಯಾಪಿತಸಿಂ ।
ಹಾಸನನವನತಸಕಲಸು
ರಾಸುರನಭಿವಂದ್ಯಚರಿತನಪಗತದುರಿತಂ ॥ ೧ ॥

ಶ್ರೀಸಕಲಸುರಾಸುರಪತಿ
ಭಾಸುರಮಣಿಮುಕುಟಘಟ್ಟಿತಾಂಘ್ರಿದ್ವಯಸಿಂ ।
ಹಾಸನಶಿಖರಸ್ಥಿತಚರ
ಣಾ ಸಕಲಜನಕ್ಕೆ ನೀನೆ ಕಲ್ಪಾಂಘ್ರಿಪನೈ ॥ ೨ ॥

ದಿವದಿಂದಂ ನೀಂ ಗರ್ಭ
ಕ್ಕವತರಿಸದ ಮುನ್ನೆ ಮೂಱುಕೋಟಿಯುಮರೆಯುಂ ।
ದಿವಸಕ್ಕಂ ಕಱೆವೊಂ ವೈ
ಶ್ರವಣಂ ಜಿನ ನಿಮ್ಮೊಲಧಿಕಪುಣ್ಯರುಮೊಳರೇ ॥ ೩ ॥

ಅನಿಮಿಷಸುಂದರಿಯರ್ ನಿಜ
ಜನನಿಗೆ ಜಿನ ಮಾಡಿ ಗರ್ಭಸಂಶೋಧನಮಂ ।
ವಿನಯಂಬೆರಸೋಲಗಿಸುವ
ರೆನಿಸಿದ ಪುಣ್ಯಮನಗಣ್ಯಮಂ ಬಣ್ಣಿಪರಾರ್ ॥ ೪ ॥

ದಿವಿಜರ್ ಮಜ್ಜನವಳ್ಳರ್
ದಿವಿಜನಗಂ ಪೀಠಮಾಗೆ ದಧಿಘೃತದುಗ್ಧಾ ।

ರ್ಣವಷಂಡಕಾಂಡವಮಾದು
ತ್ಸವಮನದೇ ವೊಗಟ್ಟಿದಘಬಲಾಹಕಪವನ ॥ ೫ ॥

ಬಱಿದಾದುದು ಜಲಧಿಜಲಂ
ಕಿಱಿದಿರ್ದುದು ಮೇರು ನಿನ್ನ ಭರದಿಂ ಸುಯ್ಯೊಳ್ ।
ತಱಗೆಲೆಗಳಂತೆ ಪಾಱಿದ
ರಱಿಕೆಯು ಸುರರೇಂ ಕುಮಾರಚರಿತಂ ನಿನ್ನ ॥ ೬ ॥

ಈ ವಯಸದೊಳೀ ರೂಪಿನೊ
ಳೀ ವಿಭವದೊಳಜಿತ ನೀನೆ ತೊಱೆದೈ ರಾಜ್ಯ ।
ಶ್ರೀವಲ್ಲಭೆಯುಂ ತೊಱೆಯಲ್
ದೇವ ಪೆಱರ್ ತರಳಚಿತ್ತರೇಂ ನೆಱೆದಪರೆ ॥ ೭ ॥

ಕುಲತಿಲಕ ಸಕಲಜಗತೀ
ತಲತಿಲಕ ಕುಬೇರರಚಿತಮುಚಿತ ಶ್ರೀಯಂ ।
ಕಳಕಳಿಪುದು ಸಕಲಶ್ರೀ
ವಿಳಾಸಮಂ ನಿನ್ನ ಸಮವಸರಣವಿಲಾಸಂ ॥ ೮ ॥

ನಯನತ್ರಯಯುತ ರತ್ನ
ತ್ರಯನಿಧಿ ಲೋಕತ್ರಯಂ ಸಲೋಕಿತತಾಳ ।
ತ್ರಯ ಪಾಂಡುರಾತಪತ್ರ
ತ್ರಯಮಿವು ನಿನಗಲ್ಲದಜಿತ ಪೆಱರ್ಗೊಪ್ಪುಗುಮೆ ॥ ೯ ॥

ಕ್ಷಿತಿಯೊಳಗೆಲ್ಲಂ ಧರ್ಮಾ
ಮೃತಮಂ ಕಱೆಯುತ್ತುಮಿರ್ಪ ನಿನಗೆ ನಿಳಿಂಪ ।
ಪ್ರತತಿ ಸುರಪುಷ್ಪವಷ್ಟಿಯ
ನತಿಶಯಮೆನೆ ಕಱೆವುದೆಂಬುದೊಂದಚ್ಚರಿಯೆ ॥ ೧೦ ॥

ವನಬರ್ಹಿಗಳಂ ಮೇಘ
ಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯ ।
ಧ್ವನಿ ತಣಿಪಿದಪುದು ವಿಷ್ಟಪ
ಜನಮಂ ಸಕಲತ್ರಿವಿಷ್ಟಪೈಕಾಧಿಪತೀ ॥ ೧೧ ॥

ಭೂಮಂಡಲದೊಳ್ ನಿನ್ನಿಂ
ಭಾಮಂಡಲಮೆಸೆದು ಪಸರಿಸಿರೆ ನಕ್ಷತ್ರ ।
ಗ್ರಾಮಣಿಗಳ್ ನೆಗಟ್ಟಿ ಹಿಮಕ
ರಾಮೃತಕರರೆಸೆಯಲಜಿತ ಪೇಟಿಾರ್ತಪರೆ ॥ ೧೨ ॥

ದುಂದುಭಿಗಭೀರರವ ಸುರ
ದುಂದುಭಿಗಳ್ಗಗನತಳದೊಳೆಸೆದಪುದು ಜನಾ ।
ನಂದಕರಂಗಳ್ ನೀನಘ
ಸಂದೋಹಮನಿಕ್ಕೆ ನೆಗಟ್ಟ ಜಯದುಂದುಭಿವೊಲ್ ॥ ೧೩ ॥

ನೆರೆದಿಕ್ಕುವ ಯಕ್ಷರ್ಕಳ
ಕರತಲದೊಳ್ ಪೊರೆದು ಚಾರು ಚಾಮಿಾಕರ ಚಾ ।
ಮರಚಾಮರಾಳಿಚಾಮಿಾ
ಕರರುಚಿರಚ್ಛಾಯೆ ನಿನಗದೇನೆಸೆದಪುದೊ ॥ ೧೪ ॥

ಜನಕಜನಜನಿತ ಶೋಕೋ
ಪನುದ ನವಾಶೋಕವೃಕ್ಷಮೆಸೆದಪುದು ನವ ।
ಜ್ಜನಮನಶೋಕಂ ಮಾಟ್ಪವೊ
ಲನೇಕಶಾಖಾನಿಕೀರ್ಣಕಿಸಲಯಚಯದಿಂ ॥ ೧೫ ॥

ನಿನಗನಘ ತುಂಗ ಸಿಂಹಾ
ಸನಮೆಸೆವುದು ದುರಿತಗಜಘಟಾಸಿಂಹ ಕನ ।
ತ್ಕನಕಮಣಿನಿಚಯಖಚಿತಂ
ಕನಕಮಹಾಶಿಖರಿಶಿಖರ ಲಂಘನಸಿಂಹ ॥ ೧೬ ॥

ದೇವಕೃತಂಗಳುಮಂ ಸ್ವಾ
ಭಾವಿಕಮುಮನಜಿತ ನೀನೆ ತಾಳ್ದಿದೆ ಜನಚೋ ।
ದ್ಯಾವಹಮಿವು ನಿನಗಲ್ಲದೆ
ದೇವ ಚತುಸ್ತ್ರಿಂಶದತಿಶಯಂ ಪೆಱಗೊರ್ಳವೆ ॥ ೧೭ ॥

ನಾಕಾವತರಣ ಭವದಭಿ
ಷೇಕಂ ನಿಷ್ಕ್ರಮಣ ಕೇವಲೋದಯಮಾಯ್ತಿಂ ।

ಶ್ರೀಕಲ್ಯಾಣಚತುಷ್ಕಂ
ಪ್ರಾಕಟಕಲ್ಯಾಣಮಿರ್ದುದಿಂ ನಿರ್ವಾಣಂ ॥ ೧೮ ॥

ಅನಲಂಕಾರಮುಮಜ್ಜನ
ಮನಂಬರಶ್ರೀವಿಳಾಸಮಕುಸುಮಮುಮಿಲೇ ।
ಪನಮೆನಿಪ ನಿನ್ನ ರೂಪೊ
ಳ್ಪಿನ ಪೂ ಪೆಱರುಟ್ಟು ತೊಟ್ಟ ರೂಪೊಪ್ಪುಗುಮೆ ॥ ೧೯ ॥

ಪದಿನೆಣ್ಛಾಸಿರ ಶೀಲದ
ಮೊದಲಿಗನೆಂಬತ್ತು ನಾಲ್ಕು ಲಕ್ಕೆ ಗುಣಕ್ಕಂ ।
ಮೊದಲಿಗನೆನೆ ನಿನ್ನಯ ಶೀ
ಲದಗುಣದುನ್ನತಿಯನಜಿತ ಕಾಣ್ಬೆಮೆ ಪೆಱರೊಳ್ ॥ ೨೦ ॥

ನಿನಗಹಮಿಂದ್ರರುಮಿಂದ್ರರು
ಮನಿಬರುಮೀ ಲೋಕಪಾಲರುಂ ಫಣಿಪತಿಗಳ್ ।
ಜನಪತಿಗಳೆಲ್ಲಮೆಱಗುವ
ರೆನೆ ನಿನ್ನಡಿಗಜಿತ ಜಗದೊಳೆಱಗದರೊಳರೆ ॥ ೨೧ ॥

ದೊರೆಗಾಣೆಂ ನಿನಗೆ ಜಿನೇ
ಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪೈ ಮಂ ।
ದರಗಿರಿಗೆ ಮಂದರಾದ್ರಿಯೆ
ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೆ ॥ ೨೨ ॥

ಗುಣನಿಲಯ ಮೇರುಚೂಡಾ
ಮಣಿ ಶರಣಾಗತಜಗತ್ತ್ರಯೀಜನರಕ್ಷಾ ।
ಮಣಿ ವಿನಯದಾನಚಿಂತಾ
ಮಣಿ ಚೂಡಾಮಣಿಮರೀಚಿ ರಂಜಿತಚರಣಾ ॥ ೨೩ ॥

ಕವಿರತ್ನನ ವರವಸ್ತು
ಸ್ತವರೂಪಸ್ತವಾಭರಣಂ ಭೂ ।
ಭುವನದ ಭವ್ಯಜನಂಗ
ಳ್ಗಿವಲ್ತೆ ಕಂಠಸ್ಥಮಾಗೆ ಕಂಠಾಭರಣಂ ॥ ೨೪ ॥

## ೧೫. ಕರ್ಣಪಾರ್ಯನ ನೇಮಿನಾಥ ಪುರಾಣದಿಂದ

(ಕ್ರಿ. ಶ. ೧೧೪೦)

ಹರಿಹರಹಿರಣ್ಯಗರ್ಭರ್
ಪರಮಾರ್ಥಂ ಪ್ರಭುಗಳಲ್ಲರವರ್ಗಿಲ್ಲದಱಿಂ ।
ಹರಿವಿಷ್ಟರಮೆನಿಸಿ ಜಿನೇ
ಶ್ವರ ನಿನಗೀ ಸಿಂಹವಿಷ್ಟರಂ ರಂಜಿಸುಗುಂ ॥ ೧ ॥

ಶರದಿಂದು ರುಚಿನಿಭಂಗಳ್
ನಿರುಪಮಮುಱುವತ್ತುನಾಲ್ಕು ಚಮರಚಯಂಗಳ್ ।
ಪರಮ ನಿನಗಿಕ್ಕಲೆಸೆಗುಂ
ದುರಘಾನಳತಾಪತಪ್ತರಂ ಬೀಸುವವೋಲ್ ॥ ೨ ॥

ಸಾರ್ಧದ್ವಾದಶಕೋಟಿಯ
ದುರ್ಧರದುರಿತಾರಿವಿಜಯ ಜಯಪಟಹದವೋಲ್ ।
ವಾರ್ಧಿರವವಿಜಿತಮೆಸೆದುದು
ವರ್ಧಿತಗುಣ ನಿನಗೆ ದೇವತೂರ್ಯದ ನಿನದಂ ॥ ೩ ॥

ಚಳಮಳಿನದುರ್ನಿರೀಕ್ಷಂ
ಗಳಿನಲ್ ಚಂದ್ರಾರ್ಕರವರ ಬೆಳಗುಗಳೀಂ ನಿ ।
ಶ್ಚಳಮಮಳಮಹೋರಾತ್ರಂ
ಬೆಳಗುವುದು ಜಿನೇಂದ್ರಚಂದ್ರ ನಿಜಭಾವಳಯಂ ॥ ೪ ॥

ಚಿರಸುಖಫಳಮಂ ಭವ್ಯ
ರ್ಗಿರದಾದಂ ಮೋಕ್ಷವೃಕ್ಷದಿಂ ಸೂಚಿಸುವಂ ।
ತಿರೆ ಕುಸುಮವೃಷ್ಟಿ ಸುರಿವುದು
ಸುರಕರತಳಗಳಿತಮನಘ ನಿನಗನವರತಂ ॥ ೫ ॥

ಭವಪೀನವಿಪಿನಮಂ ಸುಡು
ವ ವಿಶಾಳದವಾಗ್ನಿಯೊದವಿತೆನೆ ಕೆಂದಳಿರಿಂ ।
ಪ್ರವಿಪುಳಕುಸುಮದಶೋಕಂ
ಭವಭಯಹರ ಕರಮೆ ನಿನಗೆ ಸೊಗಯಿಪುದು ಜಿನಾ ॥ ೬ ॥

ಏಕಚ್ಛತ್ರಂಗಳೆ ಮೂ
ಲೋಕಂ ಪ್ರತ್ಯೇಕಮೆಮುಗಿವೆಂಬ ವಿವೇಕಾ ।
ಸ್ತೋಕಂ ತ್ರೈಪುರುಷರನೆ ನಿ
ರಾಕರಿಪವೊಲಾಯ್ತು ನಿನಗೆ ಛತ್ರತ್ರಿತಯಂ ॥ ೭ ॥

ತವ ದಿವ್ಯಭಾಷೆಯೆಸೆದಪು
ದು ವಿನೂತಂ ಪೂತಮಖಿಳಭಾಷಾತ್ಮಕವಿಾ ।
ಭುವನಹಿತಂ ಸ್ಯಾದ್ವಾದ
ಪ್ರವಿಪುಳವಾಂಛಿತಮತೀವ ಸೇವ್ಯಂ ಶ್ರವ್ಯಂ ॥ ೮ ॥

## ೧೬. ತ್ರೈಲೋಕ್ಯರಕ್ಷಾಮಣಿದ್ವಾದಶಕ

ಶ್ರೀಯುಂ ಜವ್ವನಮುಂ ವಿಲಾಸದೊದವುಂ ಸೌಭಾಗ್ಯಮುಂ ಮೈಮೆಯುಂ
ಮಾಯಾ ಮಂಜಿನ ಪುಂಜಮಿಂದ್ರಧನು ವಿದ್ಯುಲ್ಲೇಖೆ ಸಂಧ್ಯಾರುಣ ।
ಶ್ರೀಯೆಂಬಂತಿರೆ ನಿಷ್ಠೆಯಾಗಿರೆಮಿವಕ್ಕಾಂ ಪಾರ್ಥಿಸೆಂ ಶಾಶ್ವತ
ಶ್ರೀಯಂ ದೇವರದೇವ ಕೂರ್ತು ದಯೆಗೈ ತ್ರೈಲೋಕ್ಯರಕ್ಷಾಮಣೀ ॥ ೧ ॥

ತಾಯುಂ ತಂದೆಯುಮಾಳ್ದರುಂ ಕೆಳೆಯರುಂ ಕೂರ್ಪಾಳ್ಗಳುಂ ನಂಟರುಂ
ಕಾಯಲ್ಕಾರ್ಪರೆ ಮಂತ್ರತಂತ್ರವಿಧಿಗಳ್ ಸನ್ನಾಹಸಂಧಾನದೊಳ್ ।
ಪಾಯಂ ಕಾಗುಮೆ ಕೋಟೆಕಾಗುಮೆ ಜವಂ ಸಂಸಾರಿಯುಂ ದೈವ ಕೈ
ಗಾಯಲ್ಕಾವವರಾರು ನೀನಿರೆ ಪೆರರ್ ತ್ರೈಲೋಕ್ಯರಕ್ಷಾಮಣೀ ॥ ೨ ॥

ಮನಮೊಲ್ದೊರ್ಬನೆ ಪುಣ್ಯಮಂ ನೆರಪುವೆಂ ಪಾಪಂಗಳಂ ಪಣ್ಣೆ
ಮಾನೋರ್ವನೆ ತತ್ಫಲದ್ವಯಮನಶ್ರಾಂತಂ ತಗುಳ್ದುಂಬಡೊ ।
ರ್ಬನೆ ಕರ್ಮಕ್ಷಯದಿಂದನಂತಸುಖಮಂ ಕೈಕೊಳ್ವುದಂ ಮತ್ತಮೊ
ರ್ಬನೆ ಜೀವಕ್ಕಿದು ಸಾಜಮೆಂದು ತಿಳಿದೆಂ ತ್ರೈಲೋಕ್ಯರಕ್ಷಾಮಣೀ ॥ ೩ ॥

ಅನ್ಯಾರ್ಗಾರ್ಗೆ ಸಹೋದರಾರ್ಕೆಳೆಯರಾರ್ಗಾನಾರ್ಗೆ ತಾಯಾರ್ಗೆ ಮ
ತ್ತಾನಾರ್ಗೆನ್ನಯ ತಂದೆಯಾರ್ಗೆ ಪುದಿದಿಪ್ಪಾನಾರ್ಗೆ ಕಾಂತಾಜನಂ ।
ತಾನಾರ್ಗೆ ಬಗೆವಾಗಳಾರ್ಗೆ ಸುತರಾರ್ಗಾನಾರ್ಗೆ ಪೆತ್ತರ್ತನು
ತಾನಾರ್ಗೆಂದು ಭವಸ್ಮೃತಕ್ಕೆಳಸಿದಂ ತ್ರೈಲೋಕ್ಯರಕ್ಷಾಮಣೀ ॥ ೪ ॥

ಎನಿತಾನುಂ ಭವಮಂ ಚತುರ್ಗತಿಗಳೊಳ್ ದುಃಖಂಗಳಂ ಕಂಡೆನುಂ
ಡೆನವಕ್ಕಳ್ಕಿದೆನುಳ್ಕಿದೆಂ ಭವದಿ ನಾಂ ಮೆಯ್ಯೊಡ್ಡಲಮ್ಮೆಂ ನಿರಂ ।
ತನ ಸಂಸಾರಸಮುದ್ರದಿಂ ತೆಗೆದುಕೊಂಡೆಂ ನಾಂ ಜಿನ ಸ್ವಾಮಿ ಮು
ಕ್ತಿನಿವಾಸಕ್ಕೆ ಮಮತ್ವದಿಂ ಕಳುಪು ನೀಂ ತ್ರೈಲೋಕ್ಯರಕ್ಷಾಮಣೀ ॥ ೫ ॥

ಅಡಿ ವೇತ್ರಾಸನಝಲ್ಲರೀಮುರಜಲೀಲಾಲಂಕೃತಂ ಲೋಕಮಿ
ರ್ದುದು ವಾಯುತ್ರಯವೇಷ್ಟಿತಂ ನಿಖಿಳಸತ್ವಾಕೀರ್ಣಗರ್ಭಂ ನಭ ।
ಸ್ಸದನಾಂತರ್ಗತರಲ್ಲಿ ಮುಕ್ತರಿರಪ್ಪಿರ್ದಲ್ಲಿ ಸಿದ್ಧಸ್ವರೂ
ಪದೊಳಿಪ್ಪಂದದಿ ಮಾಳ್ಪುದಿನ್ನೆನಗೆ ನೀಂ ತ್ರೈಲೋಕ್ಯರಕ್ಷಾಮಣೀ ॥ ೬ ॥

ಒಡಲೆಂತೆಂದೊಡೆ ಶುಕ್ರಶೋಣಿತಮಯಂ ಮಾಂಸಾಸ್ಥಿಪುಂಜಂ ಮಲ
ಕ್ಕೆಡೆ ವಾತಾದಿಸಮಸ್ತದೋಷನಿಲಯಂ ದುರ್ಗಂಧಿ ಚರ್ಮಾವೃತಂ ।
ಘಡಣಂ ಪೇಸಿದೆಮಿಂತಿದಕ್ಕಿದರೊಳೇಂ ನೀಂ ಕೂರ್ತಮೂರ್ತತ್ವಮಂ
ಪಡೆವಂತಾಗಿರೆ ಮಾಡಘೌಘಜಯಮಂ ತ್ರೈಲೋಕ್ಯರಕ್ಷಾಮಣೀ ॥ ೭ ॥

ಭವವಾರಾಶಿಯೊಳಾತ್ಮನಂ ತಿರಿಪುಗುಂ ತಾನಾಸ್ರವಂ ಮಾಳ್ಕುಮಾ
ಸ್ರವದಿಂ ಮಿಥ್ಯೆ ಪೊದಳ್ದು ನಿಂದವಿರತಿವ್ಯಾಪಾರಭಾವಂ ಕಷಾ ।
ಯವಿಶೇಷಂ ಪುದಿದಿರ್ದ ಯೋಗಮದರಿಂದೀ ನಾಲ್ಕುಮಂ ನೀನಿಗ
ಲ್ಬುವುದೆನ್ನತ್ತಣಿನೆಂದು ನಿಮ್ಮ ನೆನೆವೆಂ ತ್ರೈಲೋಕ್ಯರಕ್ಷಾಮಣೀ ॥ ೮ ॥

ಅಮರ್ಗುಂ ಸಂವರೆಯಿಂದಮಭ್ಯುದಯ ಸೌಖ್ಯಾನೀಕಮೆಂದೆಂತಿದಾ
ಗಮಸಿದ್ಧಂ ಭುವನಪ್ರಸಿದ್ಧಮದರಿಂ ಸಮ್ಯಕ್ತ್ವದೊಳ್ಕೂಡಿ ಸಂ ।
ಯಮಮಂ ಪೊರ್ದಿ ಕಷಾಯದಿಂ ತೊಲಗಿ ಯೋಗಶ್ರೇಣಿಯಂ ಪಿಂಗಿ ಮೋ
ಕ್ಷಮದಕ್ಕುಂ ಪೆರತೆಲ್ಲಮಾವಗಹನಂ ತ್ರೈಲೋಕ್ಯರಕ್ಷಾಮಣೀ ॥ ೯ ॥

ಉದಯೋದ್ಭೂತಮುದೀರಣಾಜನಿತಮೆಂದಿಂದಿತ್ತೆರಂ ಕರ್ಮಬಂ
ದದಸೋರ್ವಂದಮುದಕ್ಕೆ ನಿರ್ಜರೆವೆಸರ್ಮೆಯ್ವೆತ್ತು ನಿಂದತ್ತು ಮಾ ।
ಳ್ಪುದಿದಂ ನೀನೆನಗೀಶ ನಿನ್ನ ದಯೆಯಿಂ ಕರ್ಮಂಗಳಂ ಗೆಲ್ದೊಡಾ
ಗದದೇರಿರ್ಪುದು ಬೇಳ್ಪ ನಿರ್ವೃತಿಸುಖಂ ತ್ರೈಲೋಕ್ಯರಕ್ಷಾಮಣೀ ॥ ೧೦ ॥

ಇದು ಪನ್ನೊಂದಿದು ಪತ್ತು ಭೇದಮೆನಿಪೀ ಸಾಗಾರನಾಗಾರಭೇ
ದದಿ ನಿರ್ದತ್ತಘಜಾಳಮಿರ್ದಳನದವಕ್ಕಂ ಶರ್ಮಮಾರ್ಗಂ ಜಗ ।

ತ್ರಿದನಾರಾಧಿಸಿ ದೇವ ಸಾಧಿಸುವೆ ನಿನ್ನಾ ಮುಕ್ತಿಯಂ ಗೆಂಟುಮಾ
ಡದುದಂ ನೀನೆನಗುಂಟುಮಾಡು ದಯೆಯಿಂ ತ್ರೈಲೋಕ್ಯರಕ್ಷಾಮಣೀ ॥ ೧೧ ॥

ಮರೆದುಂ ಬೇರೆ ಬಿಗುರ್ತುದಿಲ್ಲದ ಮನಂ ತತ್ತ್ವಾರ್ಥದೊಳ್ಕೂಡಿದ
ಳ್ಕರಿನಾಳ್ದಂದದು ಬೋಧಿಲಬ್ಧಿವಶದಿಂದಂ ಬೋಧಿಗವ್ಯಾಕುಳಂ ।
ನೆರವಕ್ಕುಂ ನೆರದಿರ್ದ ಬೋಧಿಯ ತವಕ್ಕೆನಲ್ಕೆಬೋಧಾಪ್ತಿಗಂ
ತರಿಸಂದಂ ಕುಡು ದೇವ ಬೋಧಿಯನವಂ ತ್ರೈಲೋಕ್ಯರಕ್ಷಾಮಣೀ ॥ ೧೨ ॥

ವಿಪುಳಶ್ರೀವರಕೋಪಣಾದಿಸಿಳಯುಂ ನಾಗೇಂದ್ರಚಂದ್ರಂ ಬುಧಾ
ಧಿಪರಿರ್ದಾಲಿಸಿ ಪೆರ್ಚಿ ಪೇಳ್ದತಿಶಯುಸ್ತೋತ್ರಂಗಳಿಂದಂ ಜಿನಾ ।
ಧಿಪ ನಿನ್ನಂ ಸ್ತುತಿಗೆಯ್ವುತಿರ್ಪೆನಗೆ ನೀಂ ಚಂದ್ರಪ್ರಭಸ್ವಾಮಿ ಮಾ
ಡುಪಮಾತೀತಮೆನಿಪ್ಪ ಮುಕ್ತಿಸುಖಮಂ ತ್ರೈಲೋಕ್ಯರಕ್ಷಾಮಣೀ ॥ ೧೩ ॥*

## ೧೭. ನಿರ್ವಾಣಲಕ್ಷ್ಮೀಪತಿ ಸ್ತವನ

ಶ್ರೀಯುಂ ನಿರ್ಮಲವಂಶಮುಂ ವಿಭುತೆಯುಂ ಶಾಸ್ತ್ರಾರ್ಥವೇದಿತ್ವಮುಂ
ಕಾಯಾಯುಸ್ಥಿರಭಾವಮುಂ ಮನುಜಗಾವಂಗಾದೊಡಂ ಮತ್ತುಪಾ ।
ದೇಯಂ ಹೇಯಮಿದೆಂದು ತಾಂ ಸ್ವಪರತತ್ತ್ವಾತತ್ತ್ವಮಂ ಕಾಣದಂ
ದಾಯೆಲ್ಲಂ ವಿಫಲಂ ದಲೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೧ ॥

ಪ್ರಣುತಾತ್ಮಾ ಪರಮೇಷ್ಠಿ ನಿಶ್ಚಯನಯಂ ತ್ವದ್ರೂಪನುಂ ದ್ರವ್ಯದಿಂ
ಗುಣದಿಂ ಪರ್ಯಯದಿಂದಮಾವನರಿಗುಂ ನಿನ್ನುಕ್ತಿಯಿಂದಾತನು ।
ಳ್ಪಣಮೋಹಗ್ರಹಮಂ ಪೆಣರ್ಚಿಸಿ ಪರಿಚ್ಛಿನ್ನಾತ್ಮತತ್ತ್ವಂ ದೃಢ
ಪ್ರಣಿಧಾನೋಚಿತನಪ್ಪನೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೨ ॥

ಹಾರಂ ಸೂತ್ರದಿನೊಂದೆ ಮೌಕ್ತಿಕಮಣಿವ್ರಾತಂಗಳಿಂ ಬೇರುಬೇ
ರಾರೂಢೋಜ್ಜ್ವಲಕಾಂತಿಯಿಂ ಬಗೆಯೆ ಬೇರುಂಬೇರುಮಲ್ತೆಂಬವೊ ।
ಲಾರ್ಕೆಯ್ವಂದು ಸದರ್ಥಪರ್ಯಯಗುಣವ್ರಾತಂಗಳಿಂ ಜೀವನೆಂ
ದಾರೊಳ್ವಂ ಸುವಿಚಾರದಿಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೩ ॥

---

*ನಾಗಚಂದ್ರಕೃತ (ಕ್ರಿ. ಶ. ಸು. ೧೧೮೦)

ಕೆನ್ನಂ ದ್ರವ್ಯತೆಯಿಂದ ಭಿನ್ನನೆ ಮರುನ್ಮರ್ತ್ಯಾದಿಪರ್ಯಾಯದಿಂ
ಭಿನ್ನಂ ದರ್ಶನಬೋಧಮುಖ್ಯಗುಣಸಂದೋಹಂಗಳಿಂ ನೋಡೆ ತಾಂ ।
ಭಿನ್ನಾಭಿನ್ನನೆನಿಕ್ಕು ಮಾತ್ಮನೆನಿತುಂ ನಿನ್ನುಕ್ತಿಯಿಂ ನಿನ್ನವೋ
ಲ್ತನ್ನಂ ಭಾವಿಸೆ ಮುಕ್ತಿಯೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೪ ॥

ಎನ್ನಂ ತತ್ಪರಮಾತ್ಮನಂ ನೆನೆಯಲಾನುಂ ಶಕ್ತಿಯಿಂ ವ್ಯಕ್ತಿಯಿಂ
ಕೆನ್ನಂ ಭವ್ಯತೆಯಿಂದಮಾಗದಿರದೆಂಬಂಗಿನ್ನದಪ್ಪಲ್ಲಿಗಂ ।
ತನ್ನಂ ತಾನರಿದನ್ಯದಿಂ ತೊಲಗಿ ತನ್ನೊಳ್ನಿಲ್ವನುಷ್ಠಾನಮು
ಚ್ಛಿನ್ನಂ ಕಾರಣಮಕ್ಕುಮೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೫ ॥

ಗುರು ತಾಂ ಪೇಳ್ದೊಡಮೇನೊ ತತ್ತ್ವರುಚಿ ತನ್ನಿಶ್ಚಾಯಕತ್ವಂ ತದಾ
ಚರಣಂ ನೆಟ್ಟನೆ ತನ್ನಧೀನಮದರಿಂದಂ ನಿಶ್ಚಯಾಪೇಕ್ಷೆಯಿಂ ।
ಗುರುವಕ್ಕುಂ ಬಗೆವಂದು ತಾನೆ ತನಗೆಂಬೀ ಯುಕ್ತಿಯಂ ಯುಕ್ತಿಯು
ಕ್ತರ ಚಿತ್ತಂಬುಗೆ ಪೇಳ್ದ ನೀನೆ ಗುರುವೈ ನಿರ್ವಾಣಲಕ್ಷ್ಮೀಪತೀ ॥ ೬ ॥

ಪಿರಿದಪ್ಪೊಂದು ವನಾಂತರಾಳದೊಳಗಿಂಬಿಲ್ಲಾಗಿ ಬಿರ್ದಿರ್ದ್ದ ಸಿಂ
ಧುರದಂತೀ ಭವದೊಳ್ ಸ್ವಕರ್ಮವಶದಿಂ ಬಿರ್ದಿರ್ದ್ದನಂ ಜೀವನಂ ।
ಪರರೆತ್ತಲ್ನೆರೆವನ್ನರಾಪೊರ್ಣರ್ದು ತನ್ನಂ ತಾನೆ ಸೋತ್ಸಾಹನಾ
ದರದಿಂದೆತ್ತದೊಡೆಂಬುದುಂ ನಿಜಮತಂ ನಿರ್ವಾಣಲಕ್ಷ್ಮೀಪತೀ ॥ ೭ ॥

ಈ ಸಂಸಾರಮುಮಾತ್ಮವಿಭ್ರಮದಿಮಾತ್ಮಂಗಾತ್ಮವಿಜ್ಞಾನದಿಂ
ದೀ ಸಂಸಾರದೊಳಿರ್ಪುದಾಗದದರಿಂದಾತ್ಮಪ್ರಬೋಧೇತರಾ ।
ಭ್ಯಾಸರ್ ಬಾಹ್ಯತಪಃ ಪ್ರಪಂಚಮನೆ ನಿಚ್ಚಂ ಮಾಡುತಿರ್ದುಂ ಸಮಂ
ತೀ ಸಂಸಾರದೆ ಪಿಂಗರೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೮ ॥

ಭವವಾರಾಸಿಯೊಳಾಳ್ವರಾತ್ಮವಿಮುಖರ್ ಬಾಹ್ಯಕ್ರಿಯಾವಿಹ್ವಳರ್
ಸವಿಶೇಷಾತ್ಮವಿವೇಕರಪ್ಪವರ್ಗಳುಂ ಸ್ವಾತ್ಮಸ್ಥರಲ್ಲಾದೊಡಂ ।
ತವರುಂ ಮಗ್ನರೆ ನೆಟ್ಟನೀ ಸುವರದಂ ದುಷ್ಕರ್ಮಕಾಂಡಪ್ರಮಾ
ದವಿದೂರ ಸ್ವಗತರ್ಕ್ಕಳೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೯ ॥

ಸಮಯಜ್ಞಾನದೆ ಸಿದ್ಧಿಯಾಗದದರೊಳ್ ಶ್ರದ್ಧಾನಮಿಲ್ಲಾದೊಡಾ
ಸಮಯಜ್ಞಾನಮುಮಲ್ಲಿ ನಂಬುಗೆಯುಮುಂಟಾಗಿರ್ದೊಡಂ ಶುದ್ಧಸಂ ।

ಯಮಮಿಲ್ಲಾದೊಡಮೆಂತುಮಾಗದದರಿಂ ರತ್ನತ್ರಯಂ ಸಿದ್ಧಿಯುಂ
ಸಮನಿಕ್ಕುಂ ಮುನಿಗೆಂದು ನೀಂ ಬೆಸಸಿದೈ ನಿರ್ವಾಣಲಕ್ಷ್ಮೀಪತೀ ॥ ೧೦ ॥

ಅರಿವಾಗಳ್ ನಯಮೆಲ್ಲರಿಂದರಿದು ನಾನಾವಸ್ಥೆಯಿಂ ವಸ್ತುವಂ
ನೆರೆ ತದ್ರೂಪಮನಿಂತುಟೆಂದು ತರಿಸಂದವ್ಯಗ್ರನಾದುತ್ತಮಂ ।
ತೊರೆದೆಲ್ಲಾ ನಯಪಕ್ಷಪಾತತತಿಯಂ ಸ್ವಸ್ಥಂ ವಿಕಲ್ಪಚ್ಯುತಂ
ಪೆರುಗುಂ ನಿನ್ನ ಮತಾನುಭೂತಿಯನದಂ ನಿರ್ವಾಣಲಕ್ಷ್ಮೀಪತೀ ॥ ೧೧ ॥

ಪರಭಾವಂ ಪರಭಾವಮಂ ಜನಿಯಿಕುಂ ಸ್ವಾತ್ಮಸ್ಥಭಾವಂ ನಿರಂ
ತರಿತಂ ಸ್ವಾತ್ಮಗತತ್ವಮಂ ಬಗೆಯೆ ಪಾತ್ರಂ ಲೋಹದಿಂ ನಿರ್ಮಿತಂ ।
ನಿರುತಂ ಲೋಹಮಯಂ ಸುವರ್ಣರಚಿತಂ ಸೌವರ್ಣಮೆಂಬಂದದಿಂ
ಪರಮಲ್ತೆಂಬುದು ನಿನ್ನ ಶಾಸ್ತ್ರದ ತಿರುಳ್ ನಿರ್ವಾಣಲಕ್ಷ್ಮೀಪತೀ ॥ ೧೨ ॥

ಅಶುಭಂ ಪೊಲ್ಲದು ಕರ್ಮಮೊಳ್ಳಿತು ಶುಭಂ ಕರ್ಮಂಗಳಂ ನೋಳ್ಪಡೆಂ
ತೊ ಶುಭಂ ಲೇಸೆನಿಸಲ್ಕೆ ಸಾಲ್ವುದದುಮಂ ಸಂಸಾರಮಂ ಮಾಳ್ಕುಮೆಂ ।
ದಶುಭಕ್ಕಂ ಶುಭಕಂ ಸಮಾನತೆಯನಾಮೊಂ ಕಂಡನೈ ಕರ್ಮಮಂ
ವಶಮಂ ಮಾಡಿದ ಶುದ್ಧನಾತನೆ ಶಿವಂ ನಿರ್ವಾಣಲಕ್ಷ್ಮೀಪತೀ ॥ ೧೩ ॥

ಓರ್ವಂ ಬ್ರಾಹ್ಮಣಭಾವದಿಂ ಮದಿರೆಯುಂ ಕಂಡೋಡುವಂ ಮತ್ತಮಿ
ನ್ನೋರ್ವಂ ಬರ್ಬರಬುದ್ಧಿಯಿಂದದನದೆಂತುಂ ಬಿಟ್ಟಿರನ್ನೋಳ್ಪಡಾ ।
ಇರ್ವರ್ಗಂ ಗಡ ಮಾತೃ ಶೂದ್ರಿಕೆಯೆ ಶೂದ್ರಜಾತಿಭೇದಭ್ರಮಾ
ಖರ್ವಚೇಷ್ಟಿಸುವಂತೆ ಕರ್ಮವಿಧಿಯುಂ ನಿರ್ವಾಣಲಕ್ಷ್ಮೀಪತೀ ॥ ೧೪ ॥

ನಿರುತಂ ಪಾಪದೆ ದುರ್ಗತಿತ್ವಮದರಿಂ ನಾನಾವಿಧಂ ದುಃಖದು
ರ್ಭರಮಾ ದುಃಖದಿನಾರ್ತರೌದ್ರಪರಿಣಾಮಂ ತದ್ವಿಭಾವೋದಯಂ ।
ಪಿರಿದಪ್ಪೊಂದಘಬಂಧಹೇತುವದರಿಂದಂ ದೇವ ಪಾಪಕ್ಕೆ ಕ
ಣ್ಬುರಿಯಂ ಮಾಡುವರಲ್ಲ ನಿನ್ನನುಚರರ್ ನಿರ್ವಾಣಲಕ್ಷ್ಮೀಪತೀ ॥ ೧೫ ॥

ನಿರುತಂ ಪುಣ್ಯದೆ ಭೋಗಮಕ್ಕುಮದರಿಂದಂ ತೃಷ್ಣೆ ತೃಷ್ಣಾರ್ತಿಯಿಂ
ಪರವಸ್ತುಪ್ರಕರಾನುಭೂತಿಯದರಿಂ ರಾಗಾದಿ ರಾಗಾದಿಯಿಂ ।
ದೊರೆಕೊಂಡಾಸ್ರವಮಾಸ್ರವಂ ಭವನಿಬದ್ಧಂ ಪುಣ್ಯಮುಂ ಪಾಪದೊ
ಳ್ಸರಿಯಾಯ್ತಾ ವಿಧದಿಂದ ಯೋಗಿಗೆ ವಲಂ ನಿರ್ವಾಣಲಕ್ಷ್ಮೀಪತೀ ॥ ೧೬ ॥

ಋಂತುಂ ಯೋಗಿಗೆ ನಿಶ್ಚಲಾತ್ಮಸುಖದಿಂದಂ ಬಳ್ಕೆಯುಂ ದುಃಖದಿ
ನ್ನೆಂತಾತಂ ವಿಷಯಂಗಳಿತ್ತ್ರಗುವಂ ನೀಱಿಂದ ವಿರಾಸ್ತಿಂಗೆಯುಂ ।
ಸಂತಾಪಂ ಬಡುಗುಂ ಜ್ವಲಜ್ಜ್ವಲನನುಂ ಸಾರ್ವಂದಮಂಬಂತೆವೋ
ಲಿಂತೀ ಯುಕ್ತಿಯುಗಮ್ಯಮನ್ಯಮತದೊಳ್ ನಿರ್ವಾಣಲಕ್ಷ್ಮೀಪತೀ ॥ ೧೭ ॥

ಸ್ವಪುರೋಪಾರ್ಜಿತಪುಣ್ಯಪಾಪವಶದಿಂ ಸೌಖ್ಯಾವಹಂಗಳ್ಗಗು
ಳ್ವುಪಭೋಗಕ್ಕವು ಒಂದೊಡಾಗಳಿವುಳ್ವಾಸನ್ನಭವ್ಯಂ ನಿರ ।
ಸ್ತಪುರೋಬಂಧನಹೇತುಭೂತರತಿವಿದ್ವೇಷಂ ನಿಜಾತ್ಮಸ್ಥಿತಂ
ಕ್ಷಪಿಯಿಸುಕ್ಕುಂ ಕೃತಕರ್ಮನಂ ತದನುಗಂ ನಿರ್ವಾಣಲಕ್ಷ್ಮೀಪತೀ ॥ ೧೮ ॥

ವಿದಿತಂ ಭಾಷಿಸೆ ಜಾತಿಲಿಂಗನುರದುಂ ದೇಹಾಶ್ರಿತಂ ದೇಹಮು
ಪ್ಪೊಡೆ ಜೀವಕ್ಕೆ ಭವಪ್ರಬಂಧಮದರಿಂದಂ ಜಾತಿಲಿಂಗಂಗಳೊ ।
ಳ್ಪುದಿದೊಂದಾಗ್ರಹಮುಳ್ಳವರ್ಥವದೆ ಪಿಂಗಲ್ಪಂಗುವರ್ ಶುದ್ಧಚಿ
ತ್ಪದವೊಂದಲ್ಲದುದೆಲ್ಲಮಂ ಬಿಸಟಿವರ್ ನಿರ್ವಾಣಲಕ್ಷ್ಮೀಪತೀ ॥ ೧೯ ॥

ಹತಪಾಪಂಬೊಲು ಪುಣ್ಯಮುಂ ಶಿವಪದಪ್ರಾಪ್ತ್ಯರ್ಥಮಲ್ಲಾದೊಡಂ
ಪ್ರತಿಬಂಧಪ್ರದಮಲ್ತು ವರ್ಣತೆಗವರ್ಹಾರ್ಹಂತ್ಯಕ್ಕಮುಚ್ಚೈಃ ಕುಲೋ ।
ದಿತ ಸಂಶೋಧಕಮಲ್ಲದಪ್ಪುದರಿನೆಂತುಂ ಸರ್ವಕರ್ಮೋತ್ಕರ
ಕ್ಷತಿಯಿಂದಲ್ಲದೆ ಮುಕ್ತಿಯಾಗದು ವಲಂ ನಿರ್ವಾಣಲಕ್ಷ್ಮೀಪತೀ ॥ ೨೦ ॥

ದಿವದಿಂ ಬಂದು ನೃಪೇಂದ್ರ ತೀರ್ಥಕರರಾಜ್ಯಶ್ರೀಯುಮಂ ಬಿಟ್ಟುಭೂ
ಭುವನಂ ಬಣ್ಣಿಸೆ ದೀಕ್ಷೆಗೊಂಡನುಮಧೋಲೋಕೋದ್ಧತಂ ಭಿಕ್ಷುಭ ।
ವ್ಯವರಂ ಪಾತ್ರೆಯನಿಕ್ಕಿ ಲಬ್ಧಿವರದಿಂದಂ ದೀಕ್ಷೆಯಂ ಗೊಂಡನುಂ
ಭವದಿಂ ಪಿಂಗಿದೊಡಾವಭೇದಮವರೊಳ್ ನಿರ್ವಾಣಲಕ್ಷ್ಮೀಪತೀ ॥ ೨೧ ॥

ಅದರಿಂ ಭವ್ಯನ ದರ್ಶನೋನ್ಮುಖತೆಯುಂ ವೈರಾಗ್ಯಸಂಪತ್ತಿಯುಂ
ಪದುಳಂ ದೀಕ್ಷೆಯನಾಂಪುದುಂ ಜಿನಮತಾರ್ಥೋದ್ಬೋಧಮುಂ
ಸಂಯಮಾ ॥
ಭ್ಯುದಯಪ್ರಾಪ್ತಿಯುಮಪ್ರಮಾದತೆಯುಮಾತ್ಮಧ್ಯಾನಮುಂ ಬಾರ್ತೆಯ
ಲ್ಲವೆ ಮುನ್ನಾದ ವಿಭಾವಮೆಲ್ಲಮಫಲಂ ನಿರ್ವಾಣಲಕ್ಷ್ಮೀಪತೀ ॥ ೨೨ ॥

ತನುಮಾತ್ರಂ ಯುತಬೋಧದರ್ಶನನಸಂಖ್ಯಾತಪ್ರದೇಶಂ ಪ್ರಸಿ
ದ್ಧನಮೂರ್ತಂ ಪ್ರಭುಕರ್ತೃಭೋಕ್ತೃನಿಯತಂ ಸಂಹಾರವಿಸ್ತಾರಶ ।

ಕ್ತಿನಿಯುಕ್ತಂ ಭವಮುಕ್ತನೂರ್ಧ್ವಗತಿಶೀಲಂ ಪ್ರಾಣಭೃಜ್ಜೀವನೆಂ
ಬಿನಿತುಂ ತಾನೆ ವಿಶಿಷ್ಟಜೀವಕಥನಂ ನಿರ್ವಾಣಲಕ್ಷ್ಮೀಪತೀ ॥ ೨೩ ॥

ಚರಮಾಂಗಪ್ರಮಿತಿಧ್ಘನಾಕೃತಿಯೆ ಪೆರ್ಚಂ ಕುಂದನನ್ಯಾಂಗದೊ
ಳ್ಪೊರೆಪಿಲ್ಲಪ್ಪುದರಿಂದಮಿಂತುಮುಚಿತಾಸಂಖ್ಯಪ್ರದೇಶಂ ಪ್ರಬಂ ।
ಧುರನಷ್ಟಾಷ್ಟಕಳಂಕನಷ್ಟಗುಣನಾನಂದಾತ್ಮಕಂ ಲೋಕಭೂ
ಧರಚೂಡಾಮಣಿಸಿದ್ಧನೆಂದರಿಪಿದೈ ನಿರ್ವಾಣಲಕ್ಷ್ಮೀಪತೀ ॥ ೨೪ ॥

ವ್ರತದಿಂದಂ ಪರಿಶುದ್ಧರಾಗಿ ಮತಿಯಂ ಜೈನಾಗಮಾರ್ಥಂಗಳೊಳ್
ರತಿಯಂ ಮಾಡಿ ತದರ್ಥಮಂ ತಿಳಿದು ಸರ್ವಗ್ರಂಥಮಂ ಬಿಟ್ಟು ಸಂ ।
ಹೃತರಾಗಾದಿವಿಭಾವರಾತ್ಮಪದದೊಳ್ಯೋಗೀಂದ್ರರಿರ್ಪಂತೆ ಸಂ
ವೃತರೆಮ್ಮಂದಿಗರೀಗಳೆಂತು ನೆರೆವರ್ ನಿರ್ವಾಣಲಕ್ಷ್ಮೀಪತೀ ॥ ೨೫ ॥

ಅದರಿಂ ನಿನ್ನ ಪದಾಬ್ಜಮಂ ನೆನೆವ ನಿನ್ನಾಕಾರಮಂ ನೋಳ್ಪ ನಿ
ನ್ನ ದಯಾಮೂಲಚರಿತ್ರದೊಳ್ನೆಗಳ್ವ ನಿನ್ನೊಂದುಕ್ತಿಯಂ ಕೇಳ್ವ ಪೇ ।
ಳ್ವುದಿದುಂ ಮದ್ವಿಧಗಾಯ್ತು ದೇವ ಶರಣಂ ಸ್ವಸ್ಥತ್ವಮಿಲ್ಲಪ್ಪ ಕಾ
ಲದೊಳೀ ಮಾರ್ಗಮೆ ಮೇಲು ಕೂಡುವುದರಿಂ
ನಿರ್ವಾಣಲಕ್ಷ್ಮೀಪತೀ ॥ ೨೬ ॥

ಪರಮೇಶಂ ಪರಮೇಷ್ಠಿ ಶಂಭುವಭವಂ ಬ್ರಹ್ಮಂ ಶಿವಂ ಶಂಕರಂ
ಸ್ಮರಸಂಹಾರಕನಚ್ಯುತಂ ಪುರಹರಂ ಬುದ್ಧಂ ಜಿನಂ ವಿಷ್ಣುವೆಂ ।
ದರಹಸ್ಯಂ ಪ್ರಭು ಶುದ್ಧನೆಂದು ನೆಗಳ್ದಿರ್ಪಂತಪ್ಪನಾಮಾಳಿಯುಂ
ಪರಮಾರ್ಥಂ ತಳೆದರ್ಥಮಪ್ಪುದದು ತಾಂ ನಿರ್ವಾಣಲಕ್ಷ್ಮೀಪತೀ ॥ ೨೭ ॥

ಭವವಿಧ್ವಂಸನಮಾಸ್ತವಸ್ತವಮಿದೊಂದಂ ಪೇಳು ನೀನೆಂದು ಭ
ವ್ಯವರಪ್ರೇರಣೆಯಿಂದಮಿಂತು 'ಸುಜನೋತ್ತಂಸಂ'ಲಸದ್ವೃತ್ತ ಸ ।
ಚ್ಛವಿಮುಕ್ತಾಗಣದಿಂದೆ ನಿರ್ಮಿಸಿದುದೀ 'ನಿರ್ವಾಣಲಕ್ಷ್ಮೀಪತಿ
ಸ್ತವ' ವಿಭ್ರಾಜಿಕೆ ಭವ್ಯಕಂಠಕಲಿತಂ ನಕ್ಷತ್ರಮಾಲೋಪಮಂ ॥ ೨೮ ॥*

* ಸುಜನೋತ್ತಂಸ ಬೊಪ್ಪಣ ಪಂಡಿತ [ಕ್ರಿ. ಶ. ಸು ೧೧೮೦]

## ೧೮. ಅಗ್ಗಳನ ಚಂದ್ರಪ್ರಭ ಪುರಾಣದಿಂದ
### (ಕ್ರಿ. ಶ. ೧೧೮೯)

ಸ್ತವಾವಳಿಗೆ ವಾಙ್ಮಯಂ ಸ್ಮೃತಿಗೆ ತಾಂ ಮನೋವೃತ್ತಿಯಿಂ
ಬಿವಾರಯೆ ಸಮುನ್ನತಪಾಯಮೆನಿಸಿರ್ದುವಿರ್ದಂದುಮೇಂ ।
ಅವಾಙ್ಮನಸಗೋಚರಂ ದಿಟಕೆ ನೀಂ ಬಚಿಕ್ಕಾವುದೀ
ಭವಚ್ಚರಣಸೇವೆಯೊಳ್ ಕ್ರಿಯೆ ಜಿನೇಂದ್ರ ಚಂದ್ರಪ್ರಭಾ ॥ ೧ ॥

ಕಷಾಯಕಲುಷಾತ್ಮರಂ ಬಗೆದು ದೇವರೆಂದಾವಗಂ
ವಿಷಾದವಿಕಳತ್ವಮಂ ತಳೆವರನ್ಯರಜ್ಞಾನದಿಂ ।
ನಿಷೇವ್ಯಜಳವೋಹದಿಂ ಮರುಮರೀಚಿಯಂ ಪೊರ್ದುವಾ
ತೃಷಾರ್ತಮೃಗಜಾಳದಂದದೆ ಜಿನೇಂದ್ರ ಚಂದ್ರಪ್ರಭಾ ॥ ೨ ॥

ಅವಾರ್ಯಕುಮತಾವಳೀ ವಿಷಮನಕ್ರಚಕ್ರಾಕುಳಂ
ಭವಾಂಬುನಿಧಿ ದಾಂಟಲೆಂದರೆಬರಂತದಂ ಸಾರ್ವುದುಂ ।
ಭವನ್ಮತವಹಿತ್ರಮಂ ತಳೆದು ಕರ್ಣಧಾರತ್ವಮಂ
ನಿವೇದಿಸಿ ಸುಮಾರ್ಗಮಂ ಪೊರೆ ಜಿನೇಂದ್ರ ಚಂದ್ರಪ್ರಭಾ ॥ ೩ ॥

ಜರತ್ತೃಣಜುಗುಪ್ಸೆಯಿಂ ಬಿಸುಟಹೀಂದ್ರಮರ್ತ್ಯೇಂದ್ರನಿ
ರ್ಜರೇಂದ್ರಪದಮಂ ಪದಾನತರ್ಗೆ ಮತ್ತೆ ನೀನೀವುದೇಂ ।
ಕರಂ ಬಗೆದು ಚೋದ್ಯಮೇ ಬಯಸಿ ತಾಳ್ದಿದಾರ್ಹಂತ್ಯಮಂ
ನಿರಾಕುಳಿತಮೀವೆಯೆಂದೊಡೆ ಜಿನೇಂದ್ರ ಚಂದ್ರಪ್ರಭಾ ॥ ೪ ॥

ಲಸತ್ಸ್ಮಿತಸರೋಜಮಂ ಹಿಮಕರೋಪಳಾದರ್ಶಮಂ
ಪ್ರಸಿದ್ಧವಿಧುಬಿಂಬಮಂ ನೆಲೆಯಿವಲ್ಲವೆಂದೆಲ್ಲಮಂ ।
ಬಿಸುಟ್ಟುಮವಿಕಾರದೊಳ್ ನೆಲಸಿದತ್ತು ತನ್ನಿಚ್ಛೆಯಿಂ
ಪ್ರಸನ್ನತೆ ನಿಜಾಸ್ಯದೊಳ್ ಸಲೆ ಜಿನೇಂದ್ರ ಚಂದ್ರಪ್ರಭಾ ॥ ೫ ॥

ತ್ವದೀಯತನುಚಿಂತೆಯಂ ಪಡೆಯೆ ನಿತ್ಯನೈಶ್ಚಿಂತ್ಯಮಂ
ತ್ವದೀಯಪದಪೂಜೆಯೊಳ್ ತೊಡರೆ ಲೋಕಪೂಜ್ಯತ್ವಮಂ ।
ತ್ವದೀಯಗುಣಕೀರ್ತನಕ್ಕೆಳಸೆ ಕೀರ್ತಿಯಂ ನೀನೆ ಮಾ
ಣದೀವೆ ವಿಪರೀತಮಿಂತಿದು ಜಿನೇಂದ್ರ ಚಂದ್ರಪ್ರಭಾ ॥ ೬ ॥

ಸ್ಮರಂ ಸ್ಮರಣಮಾತ್ರದಿಂ ಪಡೆದನರ್ಧನಾರೀತ್ವಮಂ
ಹರಂಗೆ ದಿಟಮೆಂದೆ ನಿನ್ನೊಳಮದುರ್ತಹಂಕಾರದಿಂ ।
ವಿರೋಧಿಸಿ ಹತಪ್ರಭಂ ಸೆಡೆದನಂತೆ ದಲ್ ಕಾರಣಂ
ಪರಾಭವಕೆ ಗರ್ವಮಲ್ಲದೆ ಜಿನೇಂದ್ರ ಚಂದ್ರಪ್ರಭಾ ॥ ೭ ॥

ಪದಂ ನಿನಗೆ ಮುಕ್ತಿಯೊಂದೆ ಕುಡುತಿರ್ಪೆ ನೀನಂತದಂ
ಪದಾಶ್ರಿತರ್ಗೆ ಸಂತತಂ ಪಲರ್ಗೆ ಕೊಟ್ಟೊಡಂ ಮತ್ತೆ ತ ।
ತ್ಪದಚ್ಯುತಿಯದಿಲ್ಲ ನಿನ್ನೊಳಿದು ಚೋದ್ಯಮೇ ತ್ವತ್ಪ್ರಭಾ
ವದಿಂದೆ ದೊರೆಕೊಳ್ಳದಾವುದೊ ಜಿನೇಂದ್ರ ಚಂದ್ರಪ್ರಭಾ ॥ ೮ ॥

## ೧೫. ಜನ್ನನ ಅನಂತನಾಥ ಪುರಾಣದಿಂದ
ಕ್ರಿ. ಶ. ೧೨೦೯।

ಜಯ ಜಯ ಜಯ ಪರಮೇಶ್ವರ
ಜಯ ಜಯ ಜಯ ಪರಮಪುರುಷ ಜಯ ಜಯ ಜಯದು ।
ರ್ಜಯ ಮನ್ಮಥಮದಭಂಜನ
ಜಯ ಜಯ ಜಯ ದೇವದೇವನಂತ ಜಿನೇಂದ್ರಾ ॥ ೧ ॥

ನಿನ್ನ ಜೀವು ನಿನ್ನ ಮಾರ್ಗಂ
ನಿನ್ನಾಗಮಯುಕ್ತಿ ನಿನ್ನ ಮಹಿಮೋನ್ನತಿಯಿ ।
ಲ್ಲೆನ್ನ ಮನವಜೀಯೆ ಮಿಕ್ಕರೊ
ಳೆನ್ನಂ ನಿನ್ನಂತೆಮಾಡನಂತಜಿನೇಂದ್ರಾ ॥ ೨ ॥

ನಿನ್ನನೆ ಬಿಡದಾರಾಧಿಸಿ
ನಿನ್ನಯ ಗಣಕೋಷ್ಠದೊಳಗೆ ನೆಲಸಿದ ಬಹುವಿ ।
ದ್ಯೋನ್ನತರ್ಗೆಣೆಯಿಲ್ಲೆಂದೊಡೆ
ನಿನ್ನನ್ನರ್ದೇವರಾರನಂತಜಿನೇಂದ್ರಾ ॥ ೩ ॥

ಮುಸಿದೊಸೆವ ಕೊಡುವ ಕೊಳ್ವಾ
ತನೆ ದೇವಂ ಸೇವಕಂಗಮಿಲ್ಲದ ನಿನ್ನಂ ।
ನೆನೆದನೆ ನಿಜಪದವಿಗೆ ಭಾ
ಜನನಪ್ಪನದೆಂತೊ ಪೇಟಿನಂತಜಿನೇಂದ್ರಾ ॥ ೪ ॥

ಅಱಿವೆ ತನುವಾದದಾದೊಡ
ಮಱಿವೈ ನೀಂ ನನ್ನ ಗುಣಮನಿನ್ನಱಿವವರಾ ।
ರಱಿಯದೊಡೇಂ ನೀನಾನೆಂ
ಬಱಿವಱಿತಮ ನಾಲ್ಪುದೆನಗನಂತಜಿನೇಂದ್ರಾ ॥ ೫ ॥

ಮೆಱೆದೊಲಿಸುವಱಿದು ಸಲಿಸುವ
ಕುಱುಪಿಲ್ಲದ ನಿನಗೆ ದೇವನೆಂದಱಿಯದರೇ ।
ಕೆಱಗಿದಪರೆನ್ನ ಪುಣ್ಯದಿ
ನಱಿದೆಱಗಿದೆನರ್ಹನೆಂದನಂತಜಿನೇಂದ್ರಾ ॥ ೬ ॥

ಪರಮ ಭವದೀಯಚರಣ
ಸ್ಮರಣಾಗಸ್ತ್ಯಂಗೆ ಚುಳುಕಮಾತ್ರಂ ಭವಸಾ ।
ಗರಶತಮೆಂದಪೆನಾಗಮ
ವಿರುದ್ಧಮೆನ್ನದಿರತರ್ಕ್ಯನಂತಜಿನೇಂದ್ರಾ ॥ ೭ ॥

ಜಿನ ನಿನ್ನಂ ಪೂಜಿಪ ನೋ
ೞ್ಪನವರತಂ ಪೊಗೞ್ವ ಸುಖಮೆ ಮೋಕ್ಷಂ ಮೋಕ್ಷಂ ।
ನಿನಗಕ್ಕನಂತಕರಲೋ
ಚನಜಿಂಹಕನಪ್ಪೆನಕ್ಕನಂತಜನೇಂದ್ರಾ ॥ ೮ ॥

## ೨೦. ಕಮಲಭವನ ಶಾಂತೀಶ್ವರಪುರಾಣದಿಂದ

(ಕ್ರಿ. ಶ. ಸು. ೧೨೩೫)

ಶ್ರೀಮತ್ಕೇವಳಬೋಧಭಾಮಿನಿಗೆ ಲೋಕಾಲೋಕಗರ್ಭೀಕರೋ
ದ್ಧಾಮಸ್ವಚ್ಛವಪುರ್ವಿರಾಜಿತೆಗೆ ರತ್ನಾದರ್ಶಮಾಯ್ತಾದ ನಿ ।
ನ್ನೀಮಾಂಗಲ್ಯಮುಖೇಂದುಮಂಡಳದ ನಿರ್ಯತ್ಸಾಂದ್ರಚಂದ್ರಾತಪ
ಸ್ತೋಮಂ ತೊಳ್ಪುಗೆ ಮನ್ಮನಸ್ತಿಮಿತಮಂ ಶ್ರೀಶಾಂತಿತೀರ್ಥೇಶ್ವರಾ ॥ ೧ ॥

ಗೆಲಲಾವಂಗಮತೀವದುರ್ಜಯನೆ ತಾನಪ್ಪಾ ಮನೋಜಾತನಂ
ಸಲೆ ಗೆಲ್ದೋವದೆ ಮೋಹಮೂಳಭವಭೂಜೋನ್ಮೂಳನಂ ಗೆಯ್ದು ನಿ ।
ರ್ಮಳಿನಾತ್ಮಾಂಗ ಮರುದ್ರುಮಕ್ಕಮೃತಲಕ್ಷ್ಮೀದೀರ್ಘದೋರ್ವಲ್ಲರೀ
ವಳನಂಬೆತ್ತನೆ ನೀನೆ ಮತ್ತೆ ಪೆಱರಾರ್ ಶ್ರೀಶಾಂತಿತೀರ್ಥೇಶ್ವರಾ ॥ ೨ ॥

ಘನತೃಷ್ಣಾಜಳಪೂರದಿಂ ಪ್ರಬಳಮೋಹಾವರ್ತದಿಂದಾರ್ತನೂ
ತನವೀಚೀಚಯದಿಂ ವಿಜೃಂಭಿಸುವಪಾರಂ ದುಸ್ತರಂ ತಾನೆನಿ ।
ಪ್ಪಿನಿತುಂ ಪೆಂಪೆಡೆಗೊಂಡ ಸಂಸರಣವಾರಾವಾರಮಂ ದಾಂಟಿ ಪಾ
ವನಕೈವಲ್ಯಸುಖೈಕಸಿದ್ಧಿವಡೆದೈ ಶ್ರೀಶಾಂತಿತೀರ್ಥೇಶ್ವರಾ ॥ ೩ ॥
ಪರಿದೊಂದಚ್ಚರಿವೆತ್ತು ಬಿತ್ತರಿಸುವೀ ಚ್ಛತ್ರತ್ರಯೀಭಾರಿವಿ
ಷ್ಟರ ದಿವ್ಯಧ್ವನಿ ಪುಷ್ಪವೃಷ್ಟಿ ವಿಳಸದ್ಭಾಮಂಡಲಾಶೋಕಚಾ ।
ಮರದೇವಾನಕಮೆಂಬಿನಿತ್ತತಿಶಯಂ ಪೇಟುತ್ತುಮಿರ್ದತ್ತಣಂ
ಪರಮಶ್ರೀವಿಭುವಪ್ಪ ನಿನ್ನೆಸಕಮಂ ಶ್ರೀಶಾಂತಿತೀರ್ಥೇಶ್ವರಾ ॥ ೪ ॥
ಇನಿತೆಂದಿನ್ನಿವೆಂದು ನಿನ್ನ ಗುಣಮಂ ವರ್ಣಿಪ್ಪೊಡಾ ಪನ್ನಗೇ
ಶನ ಜಿಹ್ವಾಳಿಗತರ್ಕ್ಯಮೆನ್ನದೆ ಗುಣಸ್ತೋತ್ರಂಗೆಯಲ್ಕೆಂದು ಪೂ ।
ಣ್ಪಿನ ತತ್ಕೀರ್ತನೆ ಮೇರುವೆಳ್ಳನಿತೆನಿಪ್ಪಂತಕ್ಕುಮಂತಪ್ಪ ವ
ರ್ಣನೆ ಹಾಸ್ಯೋಕ್ತಿ ಭವದ್ಗುಣಂ ಗಣಿದಮೇ ಶ್ರೀಶಾಂತಿತೀರ್ಥೇಶ್ವರಾ ॥ ೫ ॥
ನಿಮಿಷಾರ್ಥಂ ನುತಿಗೆಯ್ಯೊಡಪ್ಪುದೆ ವಲಂ ಚಕ್ರೇಶ್ವರತ್ವಂ ನಿತಾಂ
ತಮುದಂ ವಾಂಛಿಸುತಿರ್ಪರಿರ್ಕೆಮುಸಮಂ ತಾನೊಲ್ದಿನಾನಂದದಿಂ ।
ದಮೆ ನಿನ್ನಂದಮನೆಯ್ದಿ ಪೊಂದು ಮನಮುಂಟೆನ್ನೀ ಮನಂಪೂಣ್ದುದಿಂ
ನಮನಿಪ್ಪಂತಿರೆ ದೇವ ಮಾಳ್ಪುದಜೀಮಂ ಶ್ರೀಶಾಂತಿತೀರ್ಥೇಶ್ವರಾ ॥ ೬ ॥
ನಿನತಂಘ್ರಿದ್ವಯಪಂಕಜಾರ್ಚನೆಗೆ ಸಂದಾ ಚಂದನಂ ತನ್ನಪೋ
ಲನಿತಂ ಮಾಡದೆ ತತ್ಸಮಾಪದ ಮಹೀಜಭ್ರಾಜಮಂ ದೇವ ನಿ ।
ನ್ನೆನೆವಾಭರದಿಂದೆ ಸಾರ್ದನೆನಸುಂ ನಿನ್ನಂದಮೇನಾಗದಿ
ರ್ಪನೆ ಮೇಣ್ಮಾಡದೆ ನಿನ್ನ ನ್ಯೆಮೆಯೆಸಕಂ ಶ್ರೀಶಾಂತಿತೀರ್ಥೇಶ್ವರಾ ॥ ೭ ॥

## ೨೧. ಗುಣಾವಮರ್ಣನ ಚಂದ್ರನಾಥಾಷ್ಟಕ
## (ಕ್ರಿ. ಶ. ಸು. ೧೨೩೫)

ಶ್ರೀಪಾದಂ ಗೋಮಿನೀಭಂಗಿಗೆ ನವನಳಿನಶ್ರೀಮುಖಂ ಶ್ರವ್ಯದಿವ್ಯಾ
ಳಾಪಜ್ಯೋತ್ಸ್ನಾವಿಲಾಸಕ್ಕಮಲಹಿಮಕರಸ್ವಚ್ಛಬೋಧಂ ತ್ರಿಲೋಕೀ ।
ರೂ[ಪಾದರ್ಶಕ್ಕೆ]ವಾತ್ಮಾಕೃತಿ ಶಿವಸುಖವಲ್ಲೀವಿತಾನಕ್ಕದಪ್ಪಾ
ದಾ ಪೂರ್ಣೈಶ್ವರ್ಯಮಂ ಮಾಡೆಮಗೆ ಸುಖಾವಾಪ್ತಿಯಂ ಚಂದ್ರನಾಥಾ ॥ ೧ ॥

ನೆನೆವಂದಾನಂದದಿಂ ತಣ್ಣನೆ ತಣಿದು ಜಿಗಿಲ್ಕುಂ ಮನಂಬಂದು ಕಂಡಂ
ದೆಸಸುಂ ತಣ್ಪಿಂ ಕುಳಿರ್ಕೊರ್ೞುಗುಮುಮರ್ದಿನೊಳಟ್ಟಂತೆ
(ಕಣ್ ಬಣ್ಣಿ)ಪಂದಿಂ ।
ಪಿನಲಂಪಂ ಸೇಱಿಪಂತಗ್ಗಲಿ(ಸಿ)ನಲಿಗುಪಿಸಾ ಜಿಷ್ಣೆಯೊಂದಂದು ನಿನ್ನಂ
ನೆನೆದುಂ ಕಂಡುಂ ಪೊಗಟ್ಟುಂ ಸುಜಿಯಿಸಿಸಿದವಂ ಧನ್ಯನೈ
ಚಂದ್ರನಾಥಾ ॥ ೨ ॥

ನಿನಗಿಂದ್ರಂ ಪಂಚಕಲ್ಯಾಣಮನೆಸಗಿ ಮಹೈಶ್ವರ್ಯನಾದಂ ಕಡಲ್ ಪಾ
ಲ್ಕೊನಲಂ ಜನ್ಮಾಭಿಷೇಕಕ್ರಿಯೆಗೆ ಸಲಿಸಿ ಗಂಭೀರವಾಯ್ತದ್ರಿಪಂ ಮು ।
ಜ್ಜನಲೀಲಾಪೀಠಮಾಗಿರ್ದವಿಚಳಮೆನಿಸಿತ್ತೆಂದೊಡೈಶ್ವರ್ಯಗಾಂಭೀ
ರ್ಯಸುತಸ್ಥೈರ್ಯಕ್ಕೆ ಲೋಕತ್ರಯದೊಳೆಣೆಯದಾರ್ ನಿನ್ನವೋಲ್
ಚಂದ್ರನಾಥಾ ॥ ೩ ॥

ಸುದತೀಲೀಲಾಂಗಮಂ ಸೋಂಕದ ನವಯುವತೀಸ್ನಿಗ್ಧಮುಗ್ಧಾಸ್ಯಮಂ ನೋ
ಡದಕಾಂತಾಳಾಪಮಂ ಕೇಳದ ವನಜಮುಖೀವಕ್ತ್ರಸೌರಭ್ಯಮಂ ಕೊ ।
ಳ್ಳದ ರಾಮಾರಮ್ಯಬಿಂಬಾಧರ ರಸಮನದುತ್ತೀರ್ಣಂಟಿದಕ್ಷ್ಮಾಣಮೋಕ್ಷಾ
ಸ್ಪದಲಕ್ಷ್ಮೀಸಂಗಸೌಖ್ಯೋನ್ನತಿ ನಿನಗೆ ನಿಜಂ ದೇವರೊಳ್
ಚಂದ್ರನಾಥಾ ॥ ೪ ॥

ಹರಿಪೀಠಂ ಮೋಹಮಾತಂಗಮನೞಿಸಿತೋ ಚಾಮರಂ ಕಾಮದೀಪಾಂ
ಕುರಮಂ ಬೀಸಿತ್ತೊ ಭಾಮಂಡಲ(ವಘ)ತಮಮಂ ತೂಳ್ದಿತೋ ಪುಂಡರೀಕಂ ।
ಪುರಿದತ್ತೋ ಜನ್ಮಸಂತಾಪಮನೞಿಸಿತೋ ಶೋಕಮಂ ತಳ್ತಶೋಕಂ
ಭರದಿಂದೆಂಬಂತೆ ಮೊಯ್ಯೋಜಿಪ್ಪ ನಿಜಸಭೆಯೊಳ್ ತದ್ಭಯಂ
ಚಂದ್ರನಾಥಾ ॥ ೫ ॥

ಮೃಗತೃಷ್ಣಾಭೋಗಮಂ ತಿದ್ದಿದ ನಿಡುಮುಡುವೆಂದೆಯ್ದುವಾಭೀಳ ಕಾಳೋ
ರಗನಂ ನೇವಾ(ಳ)ವೆಂದೆತ್ತುವ ನಿಶಿತಕನತ್ಖಡ್ಗಮಂ ನೈದಿಲೊಳ್ವಾ ।
ಸಿಗಮೆಂದಾಂಪಂತೆ ನೀನಲ್ಲದ ಕುಮತಶತಭ್ರಾಂತರಂ ದೇವರೆಂದೋ
ಲಗಿಪೆಗ್ಗರ್ಗಾದ ಬೋಧಂ ನಗಿಸುವುದಭವತ್ತ್ರಾಪ್ತರಿಂ ಚಂದ್ರನಾಥಾ ॥ ೬ ॥

ಗಳಿತಂ ಘಾತಿವ್ರಜಂ ಪಿಂಗಿದ ಜವನಿಕೆ ಪುಷ್ಪೋಲ್ಲಸದ್ವೃಷ್ಟಿಪುಷ್ಪಾಂ
ಜಳಿದಿವ್ಯಶ್ರವ್ಯನಾದಂ ಸರಸಮಧುರಗೀತಸ್ವನಂ ದೇವಭೇರೀ ।

ಕುಳನಾದಂ ವಿಕ್ಕ ಢಕ್ಕಾರವಮೆಸೆ ಭವದಾಸ್ಥಾನದೊಳ್ ರಂಜಿಕುಂ ಮಂ
ಜುಳಮುಕ್ತಿಶ್ರೀ ವಧೂಸಂಗದೊಳಭಿನವಸಂಗೀತಕಂ ಚಂದ್ರನಾಥಾ ॥ ೭ ॥

ಸ್ಫುರಿತ ಶ್ರೀಪಾದಮುದ್ಯೋತಿಸೆ ಕಡೆ ತನುವಾಕಾಂಬರಶ್ರೀ ಪೊದಟ್ಟಿ
ಪ್ಪಿರೆ ಸತ್ಸಂದೋಹವಾರಾಜಿಸೆ ಕುವಲಯವಾನಂದಮಂ ತಾಳ್ದೆ ಕಾಮಾ।
ತುರಚಕ್ರಕ್ಕಾಗೆ ರಾಗಕ್ಷಯಮಮೃತಸಿಧಿಸ್ಫೂರ್ತಿ ಕೆಯ್ಗೆಯ್ಯೆ ನಿಚ್ಚಂ
ಧರಣೀಲೋಕಕ್ಕೆ ಸಿಸ್ನಿಂ ದ್ವಿಗುಣಿಸುವುದು ಚಂದ್ರೋದಯಂ
ಚಂದ್ರನಾಥಾ ॥ ೮ ॥

ಬಹುವಿದ್ಯಾನಂದನಂ ಪಂಡಿತಮುನಿಪತಿಚಂದ್ರಪ್ರಶ್ರೀಪದಾಂಭೋ
ರುಹಸೇವಾಸಂಗಭೃಂಗಂ ಕ್ಷಿತಿನುತಗುಣವರ್ಣಂ ವಚೋವಾಲೆಯಿಂದ।
ನ್ನಹವಾದಂ ಪೂಜಿಸಲ್ ರಾಜಪ|ಪದ|ನಸಸಂ ಮಾಚಿಕಿತಿವ್ಯರ್ಗೆ ಸೌಖ್ಯಾ
ವಹಮಂ ಕೊಲ್ಲಾಪುರ ಶ್ರೀತ್ರಿಭುವನತಿಲಕಾಲಂಕೃತಂ ಚಂದ್ರನಾಥಂ ॥ ೯ ॥

## ೨೨. ವಿವಿಧ (ಅ)

## ಅಘಾಂತಾಷ್ಟಕ

ಕಡುಪಿನಿಂ ತವದರ್ಶನ ದರ್ಶನಚೋದಿತವೃತ್ತಘನಂಗಳಿಂ
ಪಿಡಿದು ಕಚ್ಚಿ ದುರಂತದುಷ್ಕೃತಬಂಧನಂಗಳಿನೊರ್ಮೆಯುಂ।
ಪೊವರಲೀಯದೆ ಘಾತಿಗಳ್ಸೆರೆಯಿಟ್ಟಿರಾ ಸೆರೆ ಕೂಟಮಂ
ಬಿಡಿಸಿ ನೀನಪವರ್ಗಮಾರ್ಗಮನೈದಿಸೆನ್ನನಘಾಂತಕ ॥ ೧ ॥

ಸ್ಥಾವರಂಗಳ ಜಂಗಮಂಗಳ ಭೇದಮುಳ್ಳನಿತೈದಿಪೊ
ತ್ತಾವಗಂ ಭವದುಃಖಮುಳ್ಳನಿತುಂಡು ಕೋಟಲೆಗೊಂಡೆ ನಾ।
ಕಾವರಿಲ್ಲದೆ ಬೆಂದು ನೀಕರಿಪೋದೆ ನಿನ್ನಘವೈರಿಯಿಂ
ದೇವ ನೀಂ ಪೆರಗಿಕ್ಕಿ ರಕ್ಷಿಸಮೋಘಮೆನ್ನನಘಾಂತಕಾ ॥ ೨ ॥

ನೆನೆವೊಡಳ್ಕಿ ಭಯಜ್ವರಂ ಬರುತಿರ್ಪುದೀಗಳುಮೆನ್ನ ಮೈ
ಇನಿತುಕಾಲಮುಮುಂಡು ಬಂದ ದುರಂತಸಂಸೃತಿದುಃಖಮಂ।
ಜಿನ ಭವಕ್ಷಯಕಾರಣಂ ಭವದುಕ್ತಿಯ ಬಿಡದಾಗಳುಂ
ನೆನೆವುದಂ ದೃಢಮಾಗಿರಲ್ಪಿರಿರಕ್ಷಿಸೆನ್ನನಘಾಂತಕಾ ॥ ೩ ॥

ನೊಂದು ಮುಹೂರ್ತಮುಂ ಶುಭಭಾವದೊಳ್ನೆರೆಕೂಡಿ ನೇ
ರ್ಪಟ್ಟಿರಲ್ಕಣಮಿಾಯದೆನ್ನನಘಂಗಳೆಂಬವರೆಣ್ಬರುಂ ।
ಟ್ಟಿಗರ್ಬಹುಬಂಧದಿಂ ಕುರಿದಪ್ಪುರಾನೋರಂತಗು
ಳ್ದಟ್ಟಿ ಭಂಗಿಪ ಬಲ್ಪನೊಂದನೆ ಮಾಡಮೋಘಮಘಾಂತಕ ॥ ೪ ॥

ತರಿಸಲಕ್ಕಣಮಾರದೆನ್ನಯ ಮೋಹಕ್ರೋಧವ ಮತ್ತನೆಂ
ಮರೆದು ಮುಂ ಪರಮಾತ್ಮಲಕ್ಷ್ಮಿಯಮಧ್ರುವಾನ್ಯವಿಭೂತಿಗ ।
ಳ್ಗೆರಗಿ ಸಂತತಮಾರ್ತರೌದ್ರದೊಳೊಂದಿ ಬೆಂದಪೆ ನಿನ್ನ ವ
ಕ್ಕೆರಗದಿಪ್ಪ ವಿಶುದ್ಧಬುದ್ಧಿಯೊಳೊಂದಿಸೆನ್ನನಘಾಂತಕಾ ॥ ೫ ॥

ಅರಿಯದೀಶ ಭವತ್ಪ್ರಭಾವಮನಿನ್ನೆಗಂ ಭವದುಕ್ತಿಗ
ಳ್ಗೆರಗಿದಾಂ ಭವಘೋರದಾರುಣದುಃಖಮೆಲ್ಲಮನುಂಡುಮೆ ।
ಯ್ಯರಿಯದೆನ್ನಯ ದರುಶನಾವರಣೀಯಕರ್ಮವಿಪಾಕದಿಂ
ಪೆರವು ಬಿನ್ನಪಮೇಂ ತ್ರಿಲೋಕಶರಣ್ಯ ರಕ್ಷಿಸಘಾಂತಕಾ ॥ ೬ ॥

ತೋರಿ ತೋರಿ ಬುಧರ್ಜರಾಮೃತಿಜನ್ಮಸಂತತಿಭೇದಮುಂ
ಸಾರಿ ಸಾರಿ ತದುಕ್ತಿಯೆಲ್ಲಮನೆನ್ನ ಪಾಪವಿಪಾಕದಿಂ ।
ಮಿಾರಿ ಮಿಾರಿ ದುರಂತದುಃಖಮನುಂಡುಮುಂಡು ಭವತ್ಪದ
ಕ್ಕಾರೆನಾರೆನಮೋಘಮಾ ಪರಿರಕ್ಷಿಸೆನ್ನನಘಾಂತಕಾ ॥ ೭ ॥

ಅರಿವೆನಧ್ರುವಮನ್ಯಲಕ್ಷ್ಮಿಗಳೆಂಬಿವೆಲ್ಲಮನೊಲ್ಲೆ ನಾಂ
ತೆರಪನೊರ್ಮೆಯುಮಾಗಲೀಯದಘಂಗಳಿಂ ಮರೆವಿರ್ದೆ ನೀ ।
ನುರುವನಂತ ಚತುಷ್ಟಯಾದಿಗುಣಂಗಳಾ ಗುಣಮೆಲ್ಲಮಂ
ನೆರೆದು ನಿನ್ನವೊಲಿಪ್ಪ ಪೆಂಪನೆ ಮಾಡಮೋಘಮಘಾಂತಕಾ ॥ ೮ ॥

ಆನೋವೀ ಭವಗಹನಾಂ
ಭೋನಿಧಿಯಂ ದಾಂಟಿ ಪೋಗಿ ನಿನ್ನಯುಮುಕ್ತಿ ।
ಸ್ಥಾನದ್ವೀಪದೊಳಿರ್ಪುದ
ನೂನಕೃಪಾರಸಸಮುದ್ರ ಬೆಸಸೆನಗನಘಾ ॥ ೯ ॥

## ೨೩. ವಿವಿಧ (ಆ)

## ಅಕೃತ್ರಿಮಚೈತ್ಯವಂದನಾಪಂಚದಶಕ

ಶ್ರೀಜನ್ಮಗೃಹಂ ಮುಕ್ತಿ
ಶ್ರೀಜಾಯೋದ್ವಾಹಗೃಹಮೆಂದೆಂಬಿನಮೆಸಗುಂ ।
ಮೂಜಗದೊಳಗೆನಿತನಿತುಂ
ಶ್ರೀಜಿನಗೃಹಮಿಾಗೆ ನಮಗೆ ಮುಕ್ತಿಶ್ರೀಯುಂ ॥ ೧ ॥

ತೊಳಗುತ್ತಿರ್ಪವು ಪುಣ್ಯಪುಂಜಮಿವು ತಾವೆಂಬಂತೆ ಮೂರುಂ ಜಗಂ
ಗಳೊಳಂ ಮಂಗಳಹೇತುಗಳ್ವಿಭುಗಳಾಶ್ಚರ್ಯಪ್ರಭಾವಾನ್ವಿತಂ ।
ಗಳನಾದ್ಯಂಗಳಕೃತ್ರಿಮಂಗಳಲಯಂಗಳ್ ಜೈನಚೈತ್ಯಾಲಯಂ
ಗಳವಿಲ್ಲಿಲಿಗನಿತ್ತನಿತ್ತೆನಿಪುವಂ ಕರ್ಣಾಟದಿಂ ಪೇಳ್ವೆಪಂ ॥ ೨ ॥

ಜ್ಯೋತಿರ್ಲೋಕವಿಮಾನಸಂಕುಳಮಸಂಖ್ಯಾತಪ್ರಮಾಣಂಗಳು
ದ್ಯೋತ ಶ್ರೀನಿಳಯಂಗಳಂತವರೊಳಿರ್ಪಚ್ಚೈತ್ಯಮುಂ ತಾವಸಂ ।
ಖ್ಯಾತವ್ಯಂತರ ದೇವತಾಗೃಹವಸಂಖ್ಯಾತಂಗಳಿಂ ನೀಳ್ದ ಸಂ
ಖ್ಯಾತಶ್ರೀಜಿನಮಂದಿರಂ ಸೊಗಯಿಕುಂ ಚಂಚತ್ಪತಾಕಾನ್ವಿತಂ ॥ ೩ ॥

ಕರಮೆಸೆದಿರ್ಕುಂ ಭವನಾ
ಮರಲೋಕದೊಳೇಳುಕೋಟಿಯುಂ ಮೇಲಿಪ್ಪ ।
ತ್ತೆರಡಕ್ಕು ಲಕ್ಕೆ ಲೆಕ್ಕದ
ವರಜಿನಚೈತ್ಯಾಲಯಂಗಳವು ನಿತ್ಯಂಗಳ್ ॥ ೪ ॥

ಪರಿವಿಡಿಯಿಂದಂ ಮೂವ
ತ್ತೆರಡಿಪ್ಪತ್ತೆಂಟು ಮತ್ತೆ ಪನ್ನೆರಡೆಂಟುಂ ।
ದೊರೆವೆತ್ತ ಲಕ್ಕಚೈತ್ಯಂ
ವರಸೌಧರ್ಮಾದಿಕಲ್ಪದೊಳ್ನಾಲ್ಕರೊಳಂ ॥ ೫ ॥

ಕರವೊಪ್ಪಿರ್ಪವು ಚೈತ್ಯ ನಾಲ್ಕುವೆರಡುಂ ಮೇಗಿರ್ದ ಕಲ್ಪಕ್ಕೆ ಸಾ
ಸಿರಮಯ್ವತ್ತವರಿಂದ ಮತ್ತಣೆರಡುಂ ಸ್ವರ್ಗಕ್ಕೆ ನಾಲ್ವತ್ತು ಸಾ ।
ಸಿರಮತ್ತಿರ್ದೆರಡಕ್ಕೆ ಮತ್ತಣೆರಡಕ್ಕಂ ಕೂಡಿ ತಾನಾರು ಸಾ
ಸಿರಮಾ ಮೇಗಣ ನಾಲ್ಕು ಕಲ್ಪತಳಕಂ ಮತ್ತೇಳುನೂರೊಪ್ಪುಗುಂ ॥ ೬ ॥

ಇನ್ನೊಂದಂದರ ಮೇಲೆಮೇಲೆಸೆವಧೋ ಗ್ರೈವೇಯಕಂ ಮೂರರೊ
ಳ್ಪನ್ನೊಂದೊಂದಿದ ನೂರು ಮಧ್ಯಮಲಸದ್ಗ್ರೈವೇಯಕಂ ಮೂರರೊ ।
ಳ್ತಾಂ ನೂರೇಳವರಿಂದ ಮತ್ತುಪರಿಮಗ್ರೈವೇಯಕಂ ಮೂರರೊ
ಳ್ಚಿನ್ನಂ ಬೀರುವ ಜೈನಚೈತ್ಯಮವು ತೊಂಬತ್ತೊಂದು ಕಣ್ಗೊಪ್ಪುಗುಂ ॥ ೭ ॥

ತರತರದಿಂದೆ ನವಾಣು
ತ್ತರಿಗಳೊಳೊಂಬತ್ತು ಸೊಗಯಿಕುಂ ಪಂಚಾಣು ।
ತ್ತರಿಗಳೊಳ್ಪೆದೆಸಗುಂ ಮಣಿ
ಕಿರಣಾವೃತ ಗಗನವಳಯಮರ್ಹನ್ನಿಳಯಂ ॥ ೮ ॥

ಪತ್ತುಂ ದಿಕ್ತಟಮುಂ ತಳತ್ತಳಪ ರತ್ನಜ್ಯೋತ್ಸ್ನೆಯಂ ಕೂಡೆ ತೀ
ವುತ್ತಂ ಸ್ವರ್ಗವಿಮಾನಸಂಕುಳಮುಮೆಲ್ಲಂ ತದೀಯ ಕ್ರಮಂ ।
ಚಿತ್ರೊಪ್ಪಿಪ್ಪುವು ನಾಲ್ಕರಿಂದ ಮಿಗಿಲಾದೆಂಭತ್ತು ಲಕ್ಕಕ್ಕೆ ತೊಂ
ಬತ್ತೇಳ್ಸಾಸಿರಮಲ್ಲಿ ಮೂರು ಮಿಗಿಲಾದಿಪ್ಪತ್ತು ಚೈತ್ಯಾಲಯಂ ॥ ೯ ॥

ಅನಿಮೇಷಾದ್ರಿಯ ನಾಲ್ಕು ಮೇಖಳೆಗೆ ನಾಲ್ಕುದ್ಯಾನಮೊಂದೊಂದು ನಂ
ದನದೊಳ್ನಾಲ್ಕೆಸೆದಿರ್ಕುಮಂತೆ ಪದಿನಾರೊಂದೊಂದು ಹೇಮಾಚಳಂ ।

..........................................................................

ಜಿನಗೇಹಂ ಮಣಿಕೂಟಚುಂಬಿತನಭಂ ದೇದೀಪ್ಯಮಾನೋಪಮಂ ॥ ೧೦ ॥

ಮತ್ತಾ ಮಂದರವೈದರೊಳ್ ಕುಲನಗಂ ಮೂವತ್ತು ಭೋಗೋರ್ವಿಗಳ್
ಪತ್ತುದ್ಯದ್ವಿಜಯಾರ್ಧಶೈಲಮವು ನೂರಿಪ್ಪತ್ತು ವಕ್ಷಾರಕ ।
ಪ್ರೋತ್ತುಂಗಾಚಲರಾಜಿನೂರವನಿತುಂ ಮುನ್ನೂರ ಪತ್ತಲ್ಲಿ ಸಂ
ಪತ್ತಿಸ್ಥಾನಮೆನಿಪ್ಪ ಜೈನಭವನಂ ಮುನ್ನೂರ ಪತ್ತೊಪ್ಪುಗುಂ ॥ ೧೧ ॥

ದೊರೆವಡೆದ ಮಾನುಷೋತ್ತರ
ಗಿರಿಯೊಳ್ ಕುಂಡಲಮಹೀಧ್ರದೊಳ್ ರುಚಕಮಹೀ ।
ಧರದೊಳಿಸುಕಾರನಗದೊ
ಳ್ಕರಮೆಸೆಗುಂ ನಾಲ್ಕು ನಾಲ್ಕರೊಳ್ಪದಿನಾರುಂ ॥ ೧೨ ॥

ತ್ರಿದಶೇಂದ್ರಾದಿ ನಿಳಿಂಪಕೋಟಿನಿಚಿತಂ ನಂದೀಶ್ವರದ್ವೀಪಮುಂ
ತದು ತದ್ದ್ವೀಪದ ದಿಕ್ಚತುರ್ಥವೊಳಗಕ್ಕುಂ ನಾಲ್ಕವೊಂದೊಂದರೊಳ್ ।

ಪದಿಮೂರಾಗಿರಿ ನೋಳ್ಪಡೈಯ್ವತೆರಪಂತೆಲ್ಲಂ ಲಸತ್ಕಾಂತಿಯಿಂ
ಪೊದಿದರ್ಹತ್ಪ್ರತಿಬಿಂಬಮುದ್ಧಮಹಿಮಾಳಂಬಂ ಕರಂ ರಂಜಿಕುಂ ॥ ೧೩ ॥

ಮತ್ತಂ ಮಧ್ಯಮ ಲೋಕದೊ
ಳುತ್ತಮಜಿನನಾಥವಸದಿಗಳ್ನಾನೂರ್ಕೈ ।
ವತ್ತೆಂಟಿಲ್ಲಂ ಮಹಿಮೆಯಿ
ನುತ್ತುಂಗಂಗಳ್ ಮಣಿಪ್ರಭಾಭಾಸಂಗಳ್ ॥ ೧೪ ॥

ಮೂರುಂ ಲೋಕಂಗಳೊಳ್ ಶ್ರೀಜಿನನಿಲಯಮಸಂಖ್ಯಾತಯುಗ್ಮಂಗಳಿಂದಂ
ಬೇರೆಂಟುಂ ಕೋಟಿಯಿಂದಗ್ಗಳಮೆಸಿಸಿದವಂತಲ್ಲಿ ಪುಕ್ಕರ್ದಮಯ್ವ ।
ತ್ತಾರುಲಕ್ಕಂಗಳಿಂತಗ್ಗಳಮೆಸಿಸಿದ ತೊಂಬತ್ತವೇಳ್ನಾಸಿರಂ ನಾ
ನೂರೆಂಬತ್ತೊಂದವಕ್ಕಾಂ ಮುದದಿನನುದಿನಂ ವಂದಿಪೆಂ ಭಕ್ತಿಯಿಂದಂ ॥ ೧೫ ॥

